ur inspiring addresses on different subjects and occasions are rations of your manysided personality. You are to every acquain- yours a true friend, philosopher and guide.

your lady, the embodiment of Indian womanhood who has ably you during the years of your service and served you dutifully we respectful felicitations.

y your life of retirement be one of contentment, peace and continued

conclusion, we hail,

NG LIVE PROF. RAMACHANDRA RAO and FAMILY!

NG LIVE HIS IDEALS!

Yours, with loving regards,
President and Members of the
**Prof. M. A. R. RAO Felicitation Committee.**

# ಗಾಂಧೀ ಸಾಹಿತ್ಯ

ಸಂಪಾದಕ:

**ಸಿದ್ಧವನಹಳ್ಳಿ ಕೃಷ್ಣಶರ್ಮ**

ಸಾಧನ ಮುದ್ರಣಾಲಯ

ಧಾರವಾಡ.

ಮುದ್ರಕರು ಮತ್ತು ಪ್ರಕಾಶಕರು:

**ಶೇಷಗಿರಿರಾವ ಗೋವಿಂದರಾವ ಕುಲಕರ್ಣಿ**

ಸಾಧನ ಮುದ್ರಣಾಲಯ, ಧಾರವಾಡ





ಬೆಲೆ ೧-೪-೦

సం. నం 2

11·8-47

[D]ear Sarma,

I hope you will succeed in your venture.

Yours

Bapu

# ಬಿನ್ನಹ

ಭರತಖಂಡದಲ್ಲಿ ಗಾಂಧೀಯುಗ ಪ್ರಾರಂಭವಾಗಿ ಕಾಲು ಶತಮಾನದ ಮೇಲಾಯಿತು. ಆ ಯುಗದೇವನ ಧರ್ಮ ಜೀವನದಲ್ಲಿ ಬೇರೂರುತ್ತಿದೆ. ನೀತಿ, ರಾಜಕೀಯ, ಸಾಹಿತ್ಯ ಎಲ್ಲವೂ ಆ ಪ್ರಭಾವದ ಸೆಳೆತಕ್ಕೆ ಸಿಕ್ಕಿವೆ. ವಾತಾವರಣವೆಲ್ಲ ಗಾಂಧೀಧರ್ಮ ಗಾಂಧೀ ದರ್ಶನಮಯವಾಗಿ ಹೋಗಿದೆ. ಈ ಧರ್ಮ, ಈ ದರ್ಶನ ಕನ್ನಡ ನಾಡಿನ ಜನಕ್ಕೆ ಪರಿಚಯವಾಗಬೇಕು. ಆ ಬಾಳು ನಮ್ಮಲ್ಲಿ ರೂಪುಗೊಳ್ಳಬೇಕು.

ಅದಕ್ಕಾಗಿ ಗಾಂಧೀ ಸಾಹಿತ್ಯ ಪರಿಚಯ ಅವಶ್ಯಕ. ಗಾಂಧೀಜೀ ೨೦ ವರ್ಷಗಳಿಂದ ಅವಿಶ್ರಾಂತವಾಗಿ ಸಾಹಿತ್ಯ ನಿರ್ಮಾಣಮಾಡಿದಾರೆ. ಗ್ರಂಥ ಲೇಖನ ಬರೆದಿದಾರೆ, ಕಾಗದ ಬರೆದಿದಾರೆ, ಮಾತಾಡಿದಾರೆ. ಒಂದು ಬಗೆಯಲ್ಲ ಆ ಸಾಹಿತ್ಯಕ್ಕೆ. ಅದೊಂದು ಮಹಾಸಮುದ್ರ. ಭಾರತೀಯ ಭಾಷೆಗಳಲ್ಲಿ ಅನುವಾದವಾಗಿ ಮಾನವ ಮನೋಲೋಕವನ್ನು ವ್ಯಾಪಿಸುತ್ತಿದೆ. ಸದ್ದಿಲ್ಲದೆ ಸತ್ಯ ಸ್ಥಾಪನೆ ಮಾಡುತ್ತಿದೆ.

ಕನ್ನಡಕ್ಕೂ ಗಾಂಧೀ ಸಾಹಿತ್ಯ ಸಾಕಷ್ಟು ಬಂದಿದೆ. ಇನ್ನೂ ಎಷ್ಟೋ ಬರಬೇಕು. ಬಂದದ್ದು ಏಕಮುಖವಾಗಿಲ್ಲ. ಅಲ್ಲಿಷ್ಟು, ಇಲ್ಲಿಷ್ಟು ಆಗಿ ಅದಕ್ಕೊಂದು ರೂಪು ಸಿಗದಂತಿದೆ. ಆ ಕೆಲಸ ಮಾಡಲೆಂದೇ ಈ ಯೋಜನೆ ಪ್ರಾರಂಭವಾಗಿದೆ. ಗಾಂಧೀಜೀ ಬರೆದ ಸಾಹಿತ್ಯವನ್ನು ಆಯ್ದು ಕ್ರಮವಾಗಿ ಕನ್ನಡಕ್ಕೆ ಭಾಷಾಂತರಿಸಿ ಕೊಡುವುದೇ ಇದರ ಉದ್ದೇಶ. ಗಾಂಧಿಜೀಯ ಲೇಖನ ಸಂಗ್ರಹ, ಸಂಭಾಷಣೆ, ವ್ಯಕ್ತಿಪರಿಚಯ, ಭಾಷಣಗಳು, ಪತ್ರಗಳು, ಆತ್ಮಕಥೆ, ಚಿಕ್ಕ ಹೊತ್ತಿಗೆಗಳು, ಗಾಂಧೀ ಕತೆಗಳು ಮುಂತಾದ ವಿಷಯವನ್ನು ಆಯ್ದು ಬರೆಯಲಾಗುತ್ತದೆ.

ಮಹಾತ್ಮಾ ಗಾಂಧೀಜಿಯ ಅನುಮತಿ ಆಶೀರ್ವಾದಗಳನ್ನು ಪಡೆದೇ ಈ ಪ್ರಯತ್ನ ಮಾಡಲಾಗಿದೆ. ಕನ್ನಡ ನಾಡಿನ ಹಿರಿಯರ ಹರಕೆಯೂ ಇದೆ. ಅವೆಲ್ಲವನ್ನೂ ಇಲ್ಲಿ ಅಚ್ಚಿಸಲಾಗಿಲ್ಲ. ಕೆಲವನ್ನು ಮಾತ್ರ ಹಾಕಿದೆ.

ಕೆಲಸ ದೊಡ್ಡದು. ಅಗತ್ಯವಾದುದು. ಕಾಲವೋ ಧೈರ್ಯಸಾಹಸಗಳಿಗೆ ಅವಕಾಶ ಕೊಡದಂಥ ಬರಗಾಲ. ಕಾಗದದ ಬೆಲೆ ಬಹಳ ಹೆಚ್ಚಾಗಿದೆ. ಆದರೂ ಒಳ್ಳೆಯ ಕೆಲಸಕ್ಕೆ ಆಲಸ್ಯಕೂಡದು ಎಂದು ಈ ಪ್ರಯತ್ನ ಮಾಡಿದೇವೆ. ಕನ್ನಡ ಜನ ಎಂದಿನಂತೆಯೆ ಉದಾರಾಶ್ರಯ ಕೊಡಬೇಕೆಂದು ಬೇಡುತ್ತೇನೆ, ಈ ಕೆಲಸದಲ್ಲಿ ನೆರವಾಗಬೇಕೆಂದು ಬೇಡುತ್ತೇನೆ,

ಕನ್ನಡಿಗರಡಿಯಾಳು,

**ಸಿದ್ದವನಹಳ್ಳಿ ಕೃಷ್ಣಶರ್ಮಾ**

ಶ್ರೀ. ಸಿದ್ದವನಹಳ್ಳಿ ಕೃಷ್ಣಶರ್ಮರವರು ಕನ್ನಡಿಗರಿಗೆ ಚೆನ್ನಾಗಿ ತಿಳಿದವರಾಗಿದ್ದಾರೆ. ಅವರ ಕನ್ನಡದ ಅಕ್ಕರೆಯನ್ನೂ, ದೇಶಭಕ್ತಿಯನ್ನೂ, ದೇಶಕಾರ್ಯಕ್ಕಾಗಿ ಅವರು ತೋರಿರುವ ತ್ಯಾಗಬುದ್ಧಿಯನ್ನೂ ಕನ್ನಡ ನಾಡು ಮೆಚ್ಚಿದೆ. ಗಾಂಧೀಜಿಯವರ ಉತ್ಕಟ ಭಕ್ತರು ಅವರು. ಅವರ ಹೆಜ್ಜೆಯಲ್ಲಿ ಹೆಜ್ಜೆಯಿಟ್ಟು ನಡೆಯುತ್ತಿರುವರು. ಅವರ "ಪರ್ಣಕುಟಿ"ಯ ಉಜ್ಜ್ವಲಸ್ಫೂರ್ತಿ, ಅವರ "ಕಿಡಿ"ಗಳ ಕಾವು, ನಮ್ಮೆಲ್ಲರನ್ನೂ ಮಿಂಚಿ ನಂತೆ ಚಿಮ್ಮಿಸಿದೆ.

ಈಗ ಆ ಭಕ್ತರು "ಗಾಂಧೀ ಸಾಹಿತ್ಯ"ವನ್ನು ಕನ್ನಡಿಗರಿಗೆ ಒದಗಿಸಿ, ಕನ್ನಡ ಮಕ್ಕಳು ತೇಜಸ್ವಿಗಳಾಗುವಂತೆ ಕಾರ್ಯ ಕೈಕೊಂಡಿರು ವುದು ನಮ್ಮ ಭಾಗ್ಯ. ಸುರಿತ ಸಾಹಿತಿಗಳಾದ, ಕನ್ನಡನಾಡ ಕೊರತೆ ಗಳನ್ನು ತುಂಬಲು ದೀಕ್ಷೆವಹಿಸಿರುವ ವೀರರಾದ ಶ್ರೀಕೃಷ್ಣಶರ್ಮರ ಉದ್ಯಮ ಯಶಸ್ವಿಯಾಗಲಿ, ಸರ್ವರೂ ಅದಕ್ಕೆ ಈ ಕಷ್ಟಕಾಲದಲ್ಲಿ ಸಹಾಯ ಸಹಾನುಭೂತಿಗಳನ್ನು ನೀಡಲಿ ಎಂದು ಹಾರೈಸುತ್ತೇನೆ.

**ಬಿ. ಎಂ. ಶ್ರೀಕಂಠಯ್ಯ**

೧

ಧಾರವಾಡದ ಸಾಧನ ಮುದ್ರಣಾಲಯದವರು "ಗಾಂಧೀ ಸಾಹಿತ್ಯ" ಪ್ರಕಟನೆಕಾರ್ಯ ಕೈಕೊಂಡಿದ್ದುದು, ಬೆಳೆಯಲಿರುವ ಕನ್ನಡ ಸಾಹಿತ್ಯಕ್ಕೆ ಶುಭಸೂಚನೆಯಾಗಿದೆ. ಶ್ರೀಮಾನ್ ಸಿದ್ಧವನಹಳ್ಳಿ ಕೃಷ್ಣ ಶರ್ಮರು ಈ ಗ್ರಂಥಮಾಲೆಗೆ ಸಂಪಾದಕರಾಗಿ ನಿಂತುದು ಕಾರ್ಯ ಸಿದ್ಧಿಯ ಸಂಚಕಾರ. ಮಹಾತ್ಮರ ವಿಚಾರಗಳು ಪರಿಣಾಮಕಾರಕವಾಗಿ ಪ್ರಚಾರಗೊಳ್ಳಬೇಕಾದರೆ, ಅದನ್ನು ಸರಿಯಾದ ರೀತಿಯಲ್ಲಿ ಹೇಳಲು ಸಾಮರ್ಥ್ಯವಂತರು ಬೇಕು. ಶ್ರೀ. ಕೃಷ್ಣಶರ್ಮರು ತಮ್ಮ ಕಾರ್ಯದಿಂದ ಅಂಥ ಪಾತ್ರತೆಯನ್ನು ತಂದುಕೊಂಡಿದ್ದಾರೆ. ಅದಲ್ಲದೇ ಅವರು ಸ್ವಂತ ಪ್ರತಿಭಾವಂತರು. ಅಂಥವರ ಸಂಪಾದಕತ್ವದಲ್ಲಿ ಹೊರಡಲಿರುವ ಮಾಲೆ ಅನೇಕ ಕನ್ನಡಿಗರ ಕೊರಳ ತೊಡವಾಗಿ ಮೆರೆಯುವದೆಂದು ನಾನು ಹಾರೈಸುತ್ತೇನೆ.

ಗದಗ
೧-೧೧-೪೧

ದ. ರಾ. ಬೇಂದ್ರೆ

೨

ಗಾಂಧೀ ಸಾಹಿತ್ಯ ನಮ್ಮ ಧರ್ಮ ಗ್ರಂಥಗಳಂತೆ ಮನೆಮನೆಯ ಲ್ಲಿಯೂ ಇರಬೇಕಾದ, ಪ್ರತಿಯೊಬ್ಬರೂ ಓದಬೇಕಾದ ವಾಙ್ಮಯ. ಈ ಸಾಹಿತ್ಯವನ್ನು ಕನ್ನಡದಲ್ಲಿ ಕೊಡುವ ಕೆಲಸವನ್ನು ಶ್ರೀ. ಸಿದ್ಧವನ ಹಳ್ಳಿ ಕೃಷ್ಣಶರ್ಮರು ಕೈಕೊಂಡದ್ದು ಬಹಳ ಯೋಗ್ಯವಾಗಿದೆ. ಅವರಿಗೆ ಅದು ತಕ್ಕ ಕಾರ್ಯ; ಅದಕ್ಕೆ ಅವರು ತಕ್ಕವರು. ಕನ್ನಡನಾಡಿನ ಜನರು ಈ ದೊಡ್ಡ ಕೆಲಸಕ್ಕೆ ಪ್ರೋತ್ಸಾಹವನ್ನು ಕೊಟ್ಟು ಅವರ ಯೋಜನೆ ಪೂರ್ಣವಾಗುವಂತೆ ಮಾಡಬೇಕು. ಗಾಂಧೀ ಸಾಹಿತ್ಯ ಸಂಪೂರ್ಣ ವಾಗಿ ಕನ್ನಡದಲ್ಲಿ ಬರುವಂತೆ ಮಾಡುವುದು ನಮ್ಮ ಕರ್ತವ್ಯ—

ಟಿ. ಸಿದ್ದಲಿಂಗಯ್ಯಾ ಬಿಎ. ಬಿಎಲ್.
ದೊಡ್ಡಬಳ್ಳಾಪುರ

# ಪ್ರಸಾದ-ದೀಕ್ಷೆ

( ಶ್ರೀಮತಿ ಪ್ರೇಮಾಬಾಯಿ ಕಂಟಕ್‌ಗೆ ಗಾಂಧೀಜೀ ಬರೆದ ಕಾಗದಗಳು )

"ಪ್ರೇಮಾಬೇನ್ ಕಂಟಕ್ ಸಾಬರಮತಿ ಆಶ್ರಮದ ಸದಸ್ಯಳೇ. ಆಕೆ ಬಿ. ಎ.; ಒಳ್ಳೆಯ ಕೆಲಸಗಾರಳು. ಬ್ರಹ್ಮಚರ್ಯ ಮೊದಲಾದ ವಿಷಯಗಳ ಬಗ್ಗೆ ಆಕೆ ನನ್ನನ್ನು ಕೇಳಿದ ಪ್ರಶ್ನೆಗಳಿಗೆ ದೀರ್ಘವಾಗಿ ಉತ್ತರ ಕೊಟ್ಟಿದ್ದೇನೆ. ಆ ಉತ್ತರಗಳು ಜನರಿಗೂ ಉಪಯೋಗವಾದಾವೆಂದು ತಿಳಿದು ಆಕೆ ಅವನ್ನು ನನ್ನ ಅನುಮತಿಯಿಂದ ಪ್ರಕಟಿಸಿದ್ದಾಳೆ."

— ಗಾಂಧೀಜೀ

# ಮುನ್ನುಡಿ

ಗಾಂಧೀಜೀ ತಮ್ಮ ಸಾಬರಮತಿ ಆಶ್ರಮದಲ್ಲಿದ್ದ ಸೇವಿಕೆಯೊಬ್ಬಳಿಗೆ ಗುಜರಾತಿಯಲ್ಲಿ ಬರೆದ ಪತ್ರಗಳ ಭಾಷಾಂತರ ಇದು. ಎಲ್ಲ ಪತ್ರಗಳೂ ತುಂಬಾ ಆತ್ಮೀಯ ರೀತಿಯವು. ಈ ಕಾಗದ ಅಚ್ಚಾದಾವು ಎಂಬ ಕಲ್ಪನೆ ಕೂಡ ಗಾಂಧೀಜೀಗೆ ಇರಲಿಲ್ಲ. ಆದರೆ ಗಾಂಧೀಜೀಯ ಬಾಳಿನಲ್ಲಿ ಮುಚ್ಚುಮರೆ-ಗುಟ್ಟು ಏನೂ ಇಲ್ಲವಲ್ಲ. ತಮ್ಮ ಆತ್ಮ ಕಥೆಯಲ್ಲಿ ಅವರು ಹೇಳದೆ ಬಿಟ್ಟ ಸಂಗತಿಯೇನಿದೆ? ಆದರೆ ಗಾಂಧೀಜೀ ಯಾರಿಗೆ ಕಾಗದ ಬರೆಯುತ್ತಾರೋ ಅವರು ತಮ್ಮ ವಿಷಯ ಆ ಪತ್ರಗಳ ಮೂಲಕ ಹೊರಬೀಳುವುದನ್ನು ನೋಡಿ ಒಪ್ಪರು. ಅವರಿಗದು ಸೇರಲಿಕ್ಕಿಲ್ಲ. ಪಿತೃವಾತ್ಸಲ್ಯದಿಂದ ತುಂಬಿದ ಈ ಕಾಗದಗಳನ್ನು ಗಾಂಧೀಜೀಯಿಂದ ಪಡೆದ ಸ್ವಯಂಸೇವಿಕೆಗೆ ತನ್ನ ಗುಣದೋಷಗಳು ಇದರಿಂದ ಎಲ್ಲರಿಗೂ ತಿಳಿದಾವಲ್ಲ ಎಂಬ ದುಃಖವಿಲ್ಲ. ಗಾಂಧೀಜೀಯಿಂದ ಈ ಗುಣವನ್ನು ಆಕೆ ಕಲಿತಿದ್ದಾಳೆ. ತನ್ನ ವಿನಯದ ಬಲವಿನಿಂದ ಆಕೆ ತನ್ನ ಹೆಸರನ್ನು ಕೊಟ್ಟಿಲ್ಲ. ಓದುಗರಿಗೆ ಉಪಯೋಗವಾಗಲಾರದ ಭಾಗಗಳನ್ನು, ಆಕರ್ಷಕವಾಗಲಾರದವನ್ನು ಬಿಟ್ಟು, ಇಲ್ಲಿ ಕೊಟ್ಟಿರುವ ಪತ್ರಗಳು ಆಯ್ದು ತೆಗೆದವಾಗಿವೆ. ಶಿಷ್ಟಸಂಪ್ರದಾಯದ ಪ್ರಕಾರ ಕಾಗದದಲ್ಲಿ ಬರುವ ಹೆಸರುಗಳನ್ನು ಬಿಡಲಾಗಿದೆ. ಆದರೂ ಚಾಣಾಕ್ಷರಾದ ಓದುಗರಿಗೆ ಆ ವ್ಯಕ್ತಿಗಳು ಯಾರು ಎಂಬುದನ್ನು ಯೋಚಿಸಿ ತಿಳಿದುಕೊಳ್ಳಲು ಸಾಕಷ್ಟು ಆಧಾರ ಈ ಕಾಗದಗಳಲ್ಲಿಯೆ ಇವೆ.

ಆಂತರಂಗಿಕ ಪತ್ರಗಳಾದ್ದರಿಂದ ಅನೇಕ ಗಂಭೀರ ವಿಷಯಗಳ ಚರ್ಚೆ ಸ್ವಲ್ಪ ಸ್ವಲ್ಪ ಬಂದಿವೆ. ಆದರೂ ಇದೇನು ಲಘುನಿಬಂಧವಲ್ಲ. ಅಧಿಕಾರಸಂಪನ್ನನಾದವರೊಬ್ಬರು ತಮ್ಮವರಿಗೆಂದು ಬರೆದ ಕಾಗದಗಳು ಸಮಾಜಕ್ಕೆ ಬೋಧಪ್ರದವಾಗಿರಬಹುದು; ಆದರೂ ಅದರ ಆಂತರಂಗಿಕ ಸ್ವಭಾವ ಕಡಮೆಯಾಗದು. ಕಾಗದ ಬರೆಯುವವರ ಮತ್ತು ಓದುವವರ ನಡುವೆ ಒಂದು ಹಿನ್ನೆಲೆಯಿರುತ್ತದೆ. ಆ ಸಮಾನ ಭೂಮಿಕೆಯ

ಮೇಲೆ ಸಿಂತು ಬರೆದ ಪತ್ರಗಳಲ್ಲಿ ಆತ್ಮೀಯತೆಯ ಪರಾಕಾಷ್ಠ ಸ್ಥಿತಿ ಕಾಣಬರುತ್ತದೆ. ಇಂಥ ಪವಿತ್ರ ವಾತಾವರಣ ದರ್ಶನದ ಸುಯೋಗ ವನ್ನು ಆಕೆ ಓದುಗರಿಗೆ ಉಂಟು ಮಾಡಿಕೊಟ್ಟಿದಾಳೆ. ಇದರಲ್ಲಿ ಆಕೆಯ ಉಪಕಾರಕ್ಕಿಂತ, ಎಂಥ ದೊಡ್ಡ ಜವಾಬದಾರಿಯನ್ನು ಈಕೆ ತಲೆಯ ಮೇಲೆ ಹಾಕಿಕೊಂಡಿದಾಳೆಂಬ ಮಾತೇ ಓದುಗರನ್ನು ಮುತ್ತಿಬಿಡು ತ್ತದೆ. ನನ್ನ ಮೇಲೆ ವಿಶ್ವಾಸವಿಟ್ಟು ಸಜ್ಜನನೆಂದು ಯಾರಾದರೂ ಮನೆಗೆ ಕರೆದು ಆದರಾತಿಥ್ಯ ಮಾಡಿದರೆ ಅಂಥ ಸದ್ಗೃಹಸ್ಥನ ಆದರ ವಿಶ್ವಾಸಗಳಿಗೆ ಪಾತ್ರರಾಗುವ ಜವಾಬದಾರಿ ಅತಿಥಿಯ ಪಾಲಿಗೆ ಬರು ತ್ತದೆ. ಈ ದೃಷ್ಟಿಯಿಂದ ಆತಿಥ್ಯವೂ ಒಂದು ರೀತಿಯ ದೀಕ್ಷೆಯಾಗಿ ಬಿಡುತ್ತದೆ. ಓದುಗರು ಈ ಜವಾಬದಾರಿಯನ್ನು ಗುರುತಿಸಬೇಕೆಂದು ವಿನಯದ ಬಿನ್ನಹ.

ಸಾಮಾಜಿಕ ವಾಙ್ಮಯದಲ್ಲಿ ನಿಜವಾದ ಪತ್ರವ್ಯವಹಾರದ ಭಾಗ ಅಮೂಲ್ಯವಾದ ದಸ್ತಾವೇಜಿನಂತೆ. ಸಾಹಿತ್ಯ ಪ್ರೇಮಿಗಳಂತೆ ಇದನ್ನು ನೋಡುವುದಕ್ಕಿಂತ ಜವಾಬದಾರ ಸಾಮಾಜಿಕರಂತೆ ನೋಡುವುದು ಅಗತ್ಯ. ಇದನ್ನು ಓದಿ ಸಾಹಿತ್ಯರಸಿಕತೆಯನ್ನು ತೃಪ್ತಿಮಾಡಿಕೊಂಡರೆ ಸಾಲದು. ತಮ್ಮ ತಮ್ಮ ಬಾಳನ್ನು ಶುದ್ಧ, ಸುಸಂಸ್ಕೃತ, ಸಮೃದ್ಧ ವಾಗಿ ಮಾಡಿಕೊಳ್ಳಬೇಕು ಎಂದು ಸೂಚಿಸಬೇಕಾಗಿದೆ.

**ಕಾಕಾ ಕಾಲೇಲಕರ.**

# ವಂದನೆ

ಮೂಲ ಗುಜರಾತಿಯ ಕಾಗದಗಳನ್ನು ಆಚಾರ್ಯ ಧರ್ಮಾಧಿಕಾರಿ, ವರ್ಧಾ, ಇವರು ಮರಾಠಿಗೆ ಭಾಷಾಂತರಿಸಿದರು. ಆ ಭಾಷಾಂತರವನ್ನು ಅನುಸರಿಸಿ ಕನ್ನಡದ ವೇಷ ಕೊಡಿಸಲಾಗಿದೆ. ಶ್ರೀಮಾನ್ ಬೇಂದ್ರೆ ಲಕ್ಷ್ಮಣರಾಯರು ಅದನ್ನು ಕನ್ನಡಿಸುವ ಕಾರ್ಯದಲ್ಲಿ ಪೂರಾ ನೆರವಾಗಿ ದಾರೆ. ಈ ಭಾಷಾಂತರದ ಶ್ರೇಯಸ್ಸೆಲ್ಲ ಅವರದೇ. ಇಬ್ಬರಿಗೂ ನನ್ನ ವಂದನೆಗಳು.

**ಸಿದ್ದವನಹಳ್ಳಿ ಕೃಷ್ಣಶರ್ಮ.**

# ಪರಿವಿಡಿ



Nov 1931

ಬಾಪೂಜಿ ಎಡಗೈಯಿಂದ ಬರೆಯುತ್ತಿದಾರೆ

# ಪ್ರಸಾದ-ದೀಕ್ಷೆ

## ೧

ಪಾದುಕೆ ನಿನಗೆ ಬೇಕೆನಿಸಿದರೆ ಇಟ್ಟುಕೋ. ಆದರೆ, ಈ ಕಟ್ಟಿಗೆ ತುಂಡು ತೆಗೆದುಕೊಂಡು ನೀನೇನು ಮಾಡುತ್ತೀ? ಅದರಿಂದ ನೀನು ಎರಡಂಗುಲ ಎತ್ತರ ಕಾಣಿಸುತ್ತೀ ಎನ್ನುವಹಾಗಿದ್ದರೆ ಆಗಬಹುದು. ಆದರೆ ಇದು ಮೂರ್ತಿಪೂಜೆಯ ಮನೋವೃತ್ತಿ; ನನಗೆ ಇದು ಸೇರದು. ನಮ್ಮ ತಂದೆಯ ಚಿತ್ರ ಒಂದಿತ್ತು ನನ್ನಲ್ಲಿ. ದಕ್ಷಿಣ ಆಫ್ರಿಕಾದಲ್ಲಿದ್ದಾಗ ನನ್ನ ಕಚೇರಿಯಲ್ಲಿ ಒಂದು ಮೂಲಗುಂಪಿನ ಕೋಣೆಯಲ್ಲಿ ಒಂದು ಹಾಕಿದ್ದೆ. ನನ್ನಲ್ಲಿ ಒಂದು ಗಡಿಯಾರದ ಸರಪಳಿಯಿತ್ತು. ಅದಕ್ಕೆ ಲಾಕೆಟ್ ಇತ್ತು. ಅದರೊಳಗೆ ನಮ್ಮ ತಂದೆಯ ಮತ್ತು ನನ್ನ ಹಿರಿಯಣ್ಣನ ಚಿತ್ರ ಇದ್ದವು. ಅದನ್ನೆಲ್ಲ ಇಂದು ಬಿಟ್ಟುಕೊಟ್ಟಿದ್ದೇನೆ. ಎಂದರೆ ಅದರರ್ಥ, ಈಗ ನನಗೆ ಅವು ಮೊದಲಿನಷ್ಟು ಪೂಜ್ಯವಲ್ಲ ಎಂದಲ್ಲ. ಅವರೀಗ ನನ್ನೆದೆಯಲ್ಲಿ ಎಲ್ಲಕ್ಕಿಂತ ಹೆಚ್ಚು ಮನೆಮಾಡಿಕೊಂಡಿದ್ದಾರೆ. ಅವರ ಗುಣಗಳನ್ನು ನೆನೆದು, ಅವನ್ನು ಅನುಕರಣ ಮಾಡುವ ಪ್ರಯತ್ನ ಮಾಡುತ್ತಾ ಇದ್ದೇನೆ. ಇದೇ ರೀತಿ ಅನೇಕ ದೇವತೆಗಳನ್ನೂ ಪೂಜಿಸಬಲ್ಲೆ. ಆದರೆ ಅವರೆಲ್ಲರ ವಿಗ್ರಹಗಳನ್ನು ನನ್ನ ಬಳಿಯಲ್ಲಿ ಇಡಬೇಕೆಂದರೆ ಅಷ್ಟು ಸ್ಥಳವಾದರೂ ಹೇಗೆ ಸಿಗಬೇಕು? ಇನ್ನು ಪಾದುಕೆ ಮುಂತಾದವನ್ನು ಇಡತೊಡಗಿದರೆ ಹೊಸದಾಗಿ ಜಮೀನು ಕೊಳ್ಳಬೇಕಾದೀತು! ನನ್ನ ಅನುಭವಪೂರ್ಣ ಬುದ್ಧಿವಾದ ಇದು: ನಾನು ಇಟ್ಟ ಯೋಗ್ಯವಾದ ಹೆಜ್ಜೆಯಲ್ಲಿ ನೀನು ಹೆಜ್ಜೆ ಇಡು. ನನ್ನ ಪಾದುಕೆ ಇಟ್ಟುಕೊಳ್ಳುವದಕ್ಕಿಂತ ಇದು ಸಾವಿರ ಪಾಲು ಉತ್ತಮ. ನೀನು ಹೀಗೆ ಮಾಡುವದನ್ನು ಯಾರಾದರೂ ನೋಡಿ, ಅವರು ಅನುಕರಿಸಿದರೂ ಏನೂ ತಪ್ಪಲ್ಲ. ಅದೇ ನಿನ್ನಲ್ಲಿ ಪಾದುಕೆ ಇದ್ದುದನ್ನು ನೋಡಿ, ಅವರು ಅಂಧಾನುಕರಣ

ಮಾಡಿಸರೆ ಅವರು ಹಳ್ಳಕ್ಕೆ ಬಿದ್ದಂತೆಯೇ ಅಲ್ಲವೇ? ಇಷ್ಟು ತಿಳಿದು ಕೊಂಡು ನಿನ್ನ ಮನಸಿಗೆ ಸರಿಕಂಡಂತೆ ಮಾಡು.

ಕರ್ತವ್ಯಕರ್ಮವನ್ನು ಅರಿತು, ಅದರಂತೆ ನಡೆದವನಿಗೆ ತೃಷ್ಣೆ ಇಲ್ಲ ದಂತೆಯೆ ಆಗಿರುತ್ತದೆ. ಯಾರಿಗೆ ತೃಷ್ಣೆ ಹಿಂಗಿಲ್ಲವೊ ಅವನಿಗೆ ಕರ್ತವ್ಯ ಕರ್ಮದ ಅರಿವೇ ಇಲ್ಲ. ತೃಷ್ಣೆಯ ಗುಡ್ಡ ಯಾರೂ ದಾಟಲಾರದಂಥ ಮಹಾಪರ್ವತ. ಅದನ್ನು ನೆಲಸಮ ಮಾಡದೆ ಬೇರೆ ಹಾದಿ ಇಲ್ಲ. ತೃಷ್ಣೆ ಬಿಡುವುದೇ ಕರ್ತವ್ಯಜ್ಞಾನದ ಅಂಕುರ. ನಾನು ಕಾಶಿಗೆ ಹೋಗಬೇಕು, ನನಗದು ಗೊತ್ತಿದೆ. ಅಲ್ಲಿಗೆ ಹೋಗುವ ದಾರಿಯೂ ನನಗೆ ಗೊತ್ತಿದೆ. ಆ ಹಾದಿಯಿಂದ ಯಾವ ಆಸೆ ನನ್ನನ್ನು ಹಿಂದಿರುಗಿಸ ಬಲ್ಲದು? ಕಾಶಿಯ ಹಾದಿಯಲ್ಲಿ ಹೋಗುವದೇ ನನ್ನ ಆಸೆ. ಅದು ಪೂರ್ಣವಾಯಿತೆಂದರೆ ಉಳಿದುದೇನು? ಅನಾಯಾಸವಾಗಿ ಲಭಿಸಿದ ಸೇವೆ ನಿನ್ನ ಕಣ್ಣೆದುರಿಗೆ ಇದೆ. ಅದನ್ನು ನೀನು ಏಕನಿಷ್ಠೆಯಿಂದ ಮಾಡಿದರೆ ನಿನಗೆ ಅದರಲ್ಲಿ ಪೂರ್ಣ ಸಂತೋಷ ಸಿಗಲೇ ಬೇಕು. ಅದರ ಮೂಲಕ ನಿನಗೆ ಸಿಗುವ ಸತ್ಸಂಗ, ಸತ್ಪಠನ ಗ್ರಾಹ್ಯ. ಅದರ ಹೊರತು ಬೇರಾವ ವಿಚಾರವೂ ನಿನಗೆ ಬರಬಾರದು. ಇದೇ ನನ್ನ ದೃಷ್ಟಿಯಲ್ಲಿ 'ಯೋಗಃ ಕರ್ಮಸು ಕೌಶಲಂ' ಇದೇ ಸಮತ್ವ, ಸಮಾಧಿ. ಆದರೆ ಇದೆಲ್ಲ ನಿನ್ನ ಮನಸಿಗೆ ಬ್ರಹ್ಮಜ್ಞಾನ ಅನಿಸಿದರೆ, ಓದುವದು ನಿನ್ನ ಆತ್ಮಕ್ಕೆ ಅಗತ್ಯವೆನಿಸಿದರೆ, ನಿನ್ನ ಆ ಅಭೀಷ್ಟ ವನ್ನು ತೃಪ್ತಿಮಾಡಿಕೊಳ್ಳುವದು ಅಗತ್ಯ.

ಕೆಲಸದ ಭಾರ ಕಡಿಮೆ ಮಾಡಿಕೊ; ವಿಶ್ರಾಂತಿ ತೆಗೆದುಕೊಳ್ಳುತ್ತ ಬಾ. ಇದನ್ನು ಹೇಗೆ ಮಾಡಬೇಕೋ ನೀನೂ .... ಇಬ್ಬರೂ ಸೇರಿ ನಿಶ್ಚಯಿಸಿರಿ. ....ದೀರ್ಘದರ್ಶಿ, ಧೈರ್ಯವಂತ, ಸಾಧು ಚರಿತ. ಅವರು ನಿನಗೆ ಅವಶ್ಯವಾಗಿ ಸಹಾಯಮಾಡುತ್ತಾರೆ. ನನ್ನಂಥವನು ನಿನಗೆ ಕೆಲ ಮಟ್ಟಿಗೆ ದಿಕ್ಕು ತೋರಿಸ ಬಲ್ಲ; ನಿಜ. ಆದರೆ ನಿನ್ನ, ನಮ್ಮೆಲ್ಲರ ಶಾಂತಿಯ ಅವಲಂಬನ ನಮ್ಮ ನಮ್ಮ ಮೇಲೆಯೇ ಇದೆ. ....ಪಂಡಿತಜೀಯ ಸಂಗೀತ ಕೇಳಿದ ಮೇಲೆ ನಿನ್ನಂಥವಳಿಗೆ ಬೇರೆ ಸಂಗೀತ ರುಚಿಸಲಾರದು.

ನಾನು ತಿಳಿಯ ಬಲ್ಲೆ. ನೀನೆ ಯಾಕೆ ಭಜನೆ ಮಾಡಬಾರದು? ನಿನಗೆ ಸಂಗೀತ ಬರುತದೆಯಲ್ಲ.

ಯರವಡಾ ಮಂದಿರ, ೨-೧೦-೩೦

**ಬಾಪೂನ ಆಶೀರ್ವಾದ.**

೨

ನಿನ್ನ ಕಾಗದ ಸಿಕ್ಕಿತು. ಇಷ್ಟು ದೊಡ್ಡ ಕಾಗದ ನೀನು ಬರೆದದ್ದು ಸಂತೋಷವೇ. ಕೆಲಸದಲ್ಲಿ ಮುಳುಗಿದ ತಂದೆ ಒಂದೇ ಒಂದು ಸಾಲು ಬರೆದರೂ ಮಕ್ಕಳು ಸಂತೋಷಪಡಬೇಕು. ಅವರು ಮಾತ್ರ ತಮ್ಮ ಮನಸನ್ನು ಬಿಚ್ಚಿ ಬರೆಯಬೇಕು.

ನನ್ನ ಹಿಡಿತಕ್ಕೆ ಒಮ್ಮೆ ಸಿಕ್ಕರೆ ಸಾಕು, ಅಂಥವರನ್ನು ನಾನು ಹಿಡಿದಿಡುತ್ತೇನೆ. ನಿಜ. ಬೇರೆ ಯಾರ ಜಾಲದಲ್ಲಾದರೂ ಸಿಕ್ಕರೆ ಸಿಕ್ಕವರ ಸರ್ವನಾಶವಾದರೂ ಆದೀತು. ನನ್ನ ಹಿಡಿತದಲ್ಲಿ ಹಾಗೆ ಆದದ್ದು ನಾ ಕಾಣೆ. ಅಂತಲೇ ನಾನು ನನ್ನ ಈ ಕಸಬನ್ನು ಸಾಗಿಸಿದ್ದೇನೆ.

ಆಗ್ರಾ, ೧೯-೯-೨೯

**ಬಾಪೂನ ಆಶೀರ್ವಾದ.**

೩

ನಿನಗೆ ಕಾಗದ ಬರೆಯಲು ನನಗೇನೂ ತೊಂದರೆಯಾಗುವದಿಲ್ಲ. ನಿನ್ನ ನಿದಾನ ಸರಿ. ಹಿಂದುಸ್ಥಾನದ ಸಮಸ್ಯೆ ಬಿಡಿಸುವದು ನನಗೆ ಬಹಳ ಪ್ರಿಯವಾದುದು. ಆಶ್ರಮದ ಪ್ರಶ್ನೆ, ಅದರಲ್ಲಿಯೂ ಭಗಿನಿಯರ ಸಮಸ್ಯೆ ಬಿಡಿಸುವದಂತೂ ನನಗೆ ಅತ್ಯಂತ ಪ್ರಿಯವಾದುದು. ಏಕೆಂದರೆ, ಮಹಾ ಸಮಸ್ಯೆಯನ್ನು ಬಿಡಿಸುವ ಗುಟ್ಟು ಅದರಲ್ಲಿದೆ. 'ಯಥಾ ಪಿಂಡೇ ತಥಾ ಬ್ರಹ್ಮಾಂಡೇ.' ಬ್ರಹ್ಮಾಂಡವನ್ನು ತಿಳಿಯುವುದರಲ್ಲಿ ತಪ್ಪು ಆಗಲೂ ಬಹುದು. ಪಿಂಡವಾದರೋ ನಮ್ಮ ಕೈಯೊಳಗಿನ ಮಾತು.

ಹುಡುಗರ ವ್ಯವಸ್ಥೆ ಚಲೋ ಆಗಿದೆ ಅನಿಸುತ್ತಿದೆ. ಹಸಿ ಹಾಗಲ ಕಾಯಿ ತಿನ್ನಲು ನಾನು ಉದ್ದೇಶಪೂರ್ವಕವಾಗಿ ಹೇಳಿದೇನೆ.

ಭಾವನೆ ಸರಲಮಾರ್ಗಗಾಮಿ. ಅದನ್ನು ಆ ದಾರಿಯಲ್ಲಿಯೇ ಒಯ್ಯುವುದೇ ಅದರ ಪರಮಾರ್ಥ. ಪುರುಷಾರ್ಥ ಶಬ್ದವು ಏಕಾಂಗಿ. ಬೇರೆ ಯಾವುದಾದರೂ ತಟಸ್ಥ ಶಬ್ದ ಹೇಳು, ನೋಡೋಣ.

ಯರವಡಾ ಮಂದಿರ, ೨೮-೧-೩೦.

**ಬಾಪೂನ ಆಶೀರ್ವಾದ.**

೪

ದೋಷವಿಲ್ಲದ ನಿದ್ದೆ ಬರಬೇಕಾದರೆ ಎಚ್ಚರಿದ್ದಾಗ ದೋಷವಿಲ್ಲದ ಆಚಾರವಿಚಾರ ಬೇಕೇಬೇಕು. ಎಚ್ಚರಿದ್ದಾಗಿನ ನಮ್ಮ ಸ್ಥಿತಿಗೆ ಪರೀಕ್ಷೆ ಗನ್ನಡಿ ನಿದ್ದೆ. ಭಾವನೆ ಅಡ್ಡ ಹಾದಿ ಹಿಡಿದಾಗ ಅದನ್ನು ತಡೆದು ನಿಲ್ಲಿಸುವ ಶಕ್ತಿ ನಮಗೆಲ್ಲರಿಗೂ ಇದೆ. ಇದಕ್ಕೆ ಒಂದು ಉತ್ಕೃಷ್ಟವಾದ ಅರ್ಥವಿದೆ. ಇಂಥ ಪ್ರಯತ್ನದಲ್ಲಿ ಸೋಲಿಗೆ ಎಡೆಯೇ ಇಲ್ಲ.

ಒಂದೂವರೆ ತಿಂಗಳಾಯಿತು; ಮುಗಿಲಲ್ಲಿ ಮೋಡವೇನೋ ಇದೆ, ಮಳೆ ಮಾತ್ರ ಬಹಳ ಕಡಮೆ. ಅಹಮದಾಬಾದಿನ ಕಡೆ ತೀರ ಕಡಮೆ ಎನ್ನುವಂತಿಲ್ಲ. ಕೈದಿಗಳಿಗೆ ನಾನು ಕಾಗದ ಬರೆಯಬಾರದು ಎಂಬ ಸಂಕೇತ ಇದೆ. ಆದ್ದರಿಂದ .... ಗೆ ಕಾಗದ ಬರೆವಾಗ ನನ್ನ ಆಶೀರ್ವಾದ ಹೇಳಿ, ಈ ಸುದ್ದಿ ತಿಳಿಸು.

ಯರವಡಾ ಮಂದಿರ, ೨-೮-೩೦

**ಬಾಪೂನ ಆಶೀರ್ವಾದ.**

೫

ಮೂರ್ತಿಪೂಜೆಗೆ ನನ್ನದು ಎರಡು ಅರ್ಥ. ಮೂರ್ತಿಯ ಧ್ಯಾನ ಮಾಡಮಾಡುತ್ತ ಅದರ ಗುಣದಲ್ಲಿ ಲೀನವಾಗಿ ಹೋಗುವದು ಒಂದು. ಇದು ಇಷ್ಟವಾದದ್ದು. ಗುಣದ ವಿಚಾರವನ್ನೇ ಮಾಡದೆ ಮೂರ್ತಿಯೇ ಮೂಲವಸ್ತು ಎಂಬುದು ಎರಡನೇಯದು. ಇದು ಅನಿಷ್ಟವಾದದ್ದು.

ಯರವಡಾ ಮಂದಿರ, ೧೮-೧೦-೩೦

**ಬಾಪೂನ ಆಶೀರ್ವಾದ.**

## ೬

ನಿನ್ನ ಕಾಗದ ಸಿಕ್ಕಿತು. ನಾನು ನಿನಗೆ ಹೇಳಿದ ಚಿಕಿತ್ಸೆಯನ್ನು ದೃಢವಾಗಿ ಮಾಡು. ಡಾಕ್ಟರು ಹೇಳಿದುದನ್ನು ಆ ಮೇಲೆ ಬೇಕಾದರೆ ಸಂತೋಷದಿಂದ ಮಾಡುವೆಯಂತೆ. ಕನಿಷ್ಠಪಕ್ಷ ಮೊಟ್ಟಮೊದಲು ಒಂದು ವಾರ ಉಪವಾಸವನ್ನಾದರೂ ಮಾಡು. ಉಪವಾಸಕ್ಕೆ ಹೆದರ ಬಾರದು. ಒಂದು ವಾರದ ಉಪವಾಸದಲ್ಲಿ ನೀನು ಎಷ್ಟೋ ಕೆಲಸ ಮಾಡಬಹುದು. ನನ್ನ ಆಯುಷ್ಯದಲ್ಲಿ ಮೊದಲ ಸಾರಿ ನಾನು ಉಪವಾಸ ಮಾಡಿದಾಗ ವಿಶ್ರಾಂತಿಯನ್ನೆ ತೆಗೆದು ಕೊಳ್ಳಲಿಲ್ಲ; ನನಗೆ ಯಾವ ತೆರದ ತೊಂದರೆಯೂ ಆಗಲಿಲ್ಲ. ಅದೂ ಒಂದು ವಾರದ ಉಪವಾಸವೇ. ಮೈಯಲ್ಲಿ ಆ ಕಾಲಕ್ಕೆ ಸ್ವಲ್ಪ ಕೊಬ್ಬು ಇತ್ತು. ಮೈಯಲ್ಲಿ ಕೊಬ್ಬಿಲ್ಲದವರು ಉಪವಾಸ ಮಾಡಿದಾಗ ಮಲಗಿಕೊಂಡಿರಬೇಕು. ಎರಡು ದಿನದ ಮೇಲೆ ನಿನಗೆ ಹೆಚ್ಚು ಬಲ ಬಂದಂತೆ ಅನಿಸೀತು. ಮೊದಲಿನ ಎರಡು ದಿನ ಸುಳ್ಳು ಹಸಿವು ಆಗುತ್ತದೆ. ಮುಂದೆ ಹಸಿವೇ ಆಗುವುದಿಲ್ಲ. ರಕ್ತ ಶುದ್ಧವಾದ ಮೇಲೇ ಹೊಟ್ಟೆ ಹಸಿವು. ಈ ನಡುವೆ ಇನೀಮಾ ತೆಗೆದುಕೊಂಡು ಹೊಟ್ಟೆಯನ್ನು ಸ್ವಚ್ಛವಾಗಿಡಬೇಕು. ಇನೀಮಾ ತೆಗೆದುಕೊಂಡ ಮೇಲೆ ಅರ್ಧಸರ್ವಾಂಗಾಸನ ಹಾಕಿದರೆ ಮೇಲಿನ ಕರುಳಿಗೆ ಕೂಡ ನೀರು ಎಟಕುತ್ತದೆ. ಆ ಆಸನ ನಿನಗೆ ಗೊತ್ತಿರದಿದ್ದರೆ ಬಿಟ್ಟುಬಿಡು. ಉಪವಾಸ ಮಾಡುವಾಗ ನೀರಿಗೆ ಉಪ್ಪು, ಸೋಡಾ ಎರಡನ್ನೂ ಸೇರಿಸಿ ವಿಶೇಷ ವಾಗಿ ಕುಡಿ. ಎಂಟು ಔನ್ಸು ನೀರಿಗೆ ಐದು ಗ್ರೇನು ಉಪ್ಪು, ಹತ್ತು ಗ್ರೇನು ಸೋಡಾ ಸೇರಿಸಿ, ಎಂಟು ಲೋಟಾ ಸುಲಭವಾಗಿ ಕುಡಿಯ ಬಹುದು. ಬಿಸಿಲಲ್ಲಿ ಕೂಡಬೇಕು. ನಿಸ್ಸಂಕೋಚವಾಗಿ ನೀನು ಇಷ್ಟು ಮಾಡಬೇಕೆಂದು ನನ್ನ ಅಪೇಕ್ಷೆ. ಬೇಕಾದರೆ ಡಾಕ್ಟರಿಗೆ ಹೇಳು. ಅವರೂ ಈ ಚಿಕಿತ್ಸೆಗೆ ಒಪ್ಪಬಹುದು. ಅನೇಕ ಡಾಕ್ಟರಿಗೆ ಈಗ ಉಪವಾಸದ ಚಮತ್ಕಾರ ರುಚಿಸಲು ಪ್ರಾರಂಭವಾಗಿದೆ.

೧೫-೧೮-೩೦

**ಬಾಪೂನ ಆಶೀರ್ವಾದ.**

೭

ನಾನು ಮಾಡಿದ ನಿರ್ಣಯದ ಕಾರಣಗಳೆಲ್ಲವೂ ನನ್ನ ಲಕ್ಷ್ಯದಲ್ಲಿದ್ದೇ ತೀರಬೇಕೆಂಬುದೇನೂ ಇಲ್ಲ. ನೀನು ನಿಜವಾದ ಸಿಪಾಯಿಯೆಂಬುದನ್ನು ತೋರಿಸಿದೆ. ಇಲ್ಲಿರುವುದರಲ್ಲಿ ಸಿಪಾಯಿಗಿರಿ ಇಲ್ಲವೆಂದು ನಿನಗೆ ಅನಿಸಿದರೆ ಅದು ತಪ್ಪು. ಸಿಪಾಯಿಗಳೆಲ್ಲ ಛಾಣಿಯಲ್ಲೇ ಇರುವುದಿಲ್ಲ. ಎಷ್ಟೋ ಜನರನ್ನು ಆಪದ್ಬಲ ( Reserved Force ) ಕ್ಕೆ ಸೇರಿಸುತ್ತಾರೆ. ಇಷ್ಟೇ ಅಲ್ಲದೆ ಕೇಂದ್ರಸ್ಥಾನಗಳಲ್ಲಿ ಒಳ್ಳೇ ಜವಾಬದಾರಿಯ ಜನ ಬೇಕಾಗುತ್ತಾರೆ. ನಾಶದ ಭಯ ಸಲ್ಲದು. ಸಂಕಟಬಂದರೆ ಇದಿರಿಸುವುದು ಅಗತ್ಯ. ಆದರೆ ನಿಷ್ಕಾರಣವಾಗಿ ಸಂಕಟದ ಕಡೆ ಓಡುವವ ಸಿಪಾಯಿಯಲ್ಲ; ಮೂರ್ಖ. ದೇವರು ಇಟ್ಟಹಾಗೆ ಇರುವುದೇ ನಿಜವಾದ ಸಿಪಾಯಿಗಿರಿ. ಅದರಲ್ಲಿ ಅನಾಸಕ್ತಿಯಿದೆ. ಇದನ್ನೇ ವ್ಯಾವಹಾರಿಕ ಭಾಷೆಯಲ್ಲಿ ಹೇಳುತ್ತೇನೆ ಕೇಳು. ನೀನು ಸ್ವಬುದ್ಧಿಯಿಂದ ಮನಃಪೂರ್ವಕವಾಗಿ ಆರಿಸಿಕೊಂಡ ದಳಪತಿ ಹೇಳಿದಂತೆ ನಡೆಯಬೇಕು; ಈ ಪಾಠವನ್ನು ನೀನು ಕಲಿತಿದ್ದೀಯೆ ತಾನೆ.

ಗೀತಾ ಪಾರಾಯಣದ ವಿಷಯವಾಗಿ ನಿನ್ನ ಅಭಿಪ್ರಾಯ ತಿಳಿಯಿತು. ಕಾಕಾಸಾಹೇಬರ* ಸಂಗಡ ಬೇಕಾದಷ್ಟು ಜಗಳವಾಡು. ಪ್ರಾರ್ಥನೆಯಲ್ಲಿ ನಿನಗಿರುವ ಅರುಚಿ, ಅಶ್ರದ್ಧೆಗಳೇ ನಿನ್ನ ವಿರೋಧಕ್ಕೆ ಕಾರಣ ಅನಿಸುತ್ತಿದೆ. ನಿನಗೆ ಸಾಧ್ಯವೆನಿಸಿದರೆ ನೀನು ರಾಮನಾಮ ಧ್ಯಾನದಿಂದಲೇ ಸಾಗಿಸಬಹುದು. ಆದರೆ ಪ್ರಾರ್ಥನೆಯ ಎಲ್ಲ ನಿಯಮದಲ್ಲಿಯೂ ನಿನಗೆ ಶ್ರದ್ಧೆಯಿರಲಿ. ಅದೇ ನನ್ನ ಸಲಹೆ. ಸಾಧ್ಯವಿದ್ದರೆ ಅರ್ಥದ ಕಡೆ ಧ್ಯಾನವಿಡು. ಶಬ್ದ ಅರ್ಥವಾಗಲಿಕ್ಕೂ ಇಲ್ಲ. ಆದರೂ ಅದರಲ್ಲೊಂದು ಸಂಸ್ಕಾರವಿದೆ, ಅದನ್ನು ಕೇಳುವುದರಿಂದ ಹಿತವೇ ಆದೀತು ಎಂಬ ಶ್ರದ್ಧೆಯಿಂದ ವಿನಯಪೂರ್ವಕವಾಗಿ ಅದನ್ನು ಕೇಳು. ಹೀಗೆಂದರೆ, ಯಾರನಾದರೂ ಹಿಡಿದು ಗೀತಾ ಪಾರಾಯಣ ಸಪ್ತಾಹ ಮಾಡಿಸಲೇ ಬೇಕಾಗಿದೆ ನನಗೆ ಎಂದು ಅರ್ಥ ಮಾಡಬೇಡ. ಹದಿನೈದು ವರ್ಷದಿಂದ

* ಕಾಕಾ ಕಾಲೇಲಕರ.

ಅನೇಕಜನ ಅನನ್ಯ ಶ್ರದ್ಧಾಪೂರ್ವಕವಾಗಿ ಮಾಡಿದ ತಪಸ್ಸಿಗೆ ಆಧಾರವಾದ ಈ ಪ್ರಾರ್ಥನೆಯಲ್ಲಿ ಏನಾದರೂ ಇರಲೇಬೇಕಲ್ಲವೆ? ನಿನ್ನ ಮನಸಿಗೆ ಇಷ್ಟು ನಾಟಿದರೆ ಸಾಕು.

ಯರವಡಾ ಮಂದಿರ, ೨೪-೧೧-೩೦

**ಬಾಪೂನ ಆಶೀರ್ವಾದ.**

೮

ನಿನ್ನ ಕಾಗದ ಓದಿ ನನಗೆ ಬಹಳ ಸಂತೋಷವಾಯಿತು. ನೀನು ಉಪವಾಸ ಮುಗಿಸಿ ಎರಡು ದಿನವಾಯಿತು ಇಂದಿಗೆ. ಈ ಕಾಗದ ನಿನ್ನ ಕೈಸೇರುವ ಹೊತ್ತಿಗೆ ನಿನಗೆ ಉಪವಾಸದ ಮಾತೇ ಮರೆತು ಹೋಗಿರಬಹುದು; ಹೊಸ ಹರೆಯದ ಅನುಭವವೂ ಆಗಿರಬಹುದು. ಅಂಥ ಅನುಭವವಾಗಿರದಿದ್ದರೆ ಉಪವಾಸ ಅಪೂರ್ಣವಾದಂತೆ ಎನ್ನುತ್ತೇನೆ. ಪರಿಣಾಮವೇನಾಯಿತೋ ನೀನು ವಿವರವಾಗಿ ಬರೆದಿಟ್ಟಿರಬಹುದು. ನಿನ್ನ ಅನುಭವ ಇತರರಿಗೂ ಉಪಯೋಗವಾಗಬೇಕು. ಉಪವಾಸವನ್ನು ಹೇಗೆ ಮುಕ್ತಾಯ ಮಾಡಬೇಕೋ ನಿನಗೆ ಗೊತ್ತೇ ಇದೆ. ಉಪವಾಸ ಮುಗಿದ ಮೇಲೆ ಬಹಳ ಹಸಿವಾಗುತ್ತದೆ. ಹಾಗೆಂದು ಅಷ್ಟು ಹೊಟ್ಟೆ ತುಂಬಿಸಿಕೊಳ್ಳಬಾರದು. ಹಾಲು ಮೊಸರು ಕೊಂಚಕೊಂಚವಾಗಿ ಹೆಚ್ಚಿಸುತ್ತ ಹೋಗಬೇಕು. ಸಿಕ್ಕಸಿಕ್ಕದ್ದನ್ನೆಲ್ಲ ತಿನ್ನಬಾರದು. ರಸಫಲಗಳನ್ನು ಬೇಕಾದಷ್ಟು ತಿನ್ನು; ಅದರಲ್ಲಿ ಜಿಪುಣತನಬೇಡ. ದೇಹ ನಿರೋಗಿಯಾಗಬೇಕು. ಉಪವಾಸ ಮಾಡಿದಾಗ ಯಥಾಪ್ರಕಾರ ಕೆಲಸಮಾಡಲಿಕ್ಕಾದುದರಲ್ಲಿ ನನಗೇನೂ ಆಶ್ಚರ್ಯವಿಲ್ಲ. ಎಷ್ಟೋ ಜನ ಹಾಗೆ ಮಾಡಿದುದನ್ನು ನಾನು ಬಲ್ಲೆ. ನನ್ನ ಸ್ವಂತ ಅನುಭವವೂ ಇದ್ದೇ ಇದೆ. ಅತ್ಯಂತ ರೋಗಪೀಡಿತ ನಾದವನಿಗೆ ಉಪವಾಸದಿಂದ ಬಹಳ ಬಲ ಬಂದಂತೆ ಅನುಭವವಾಗುತ್ತದೆ.

...... ನಿನ್ನ ವಿಷಯವಾಗಿ ಆಕ್ಷೇಪಣೆ ಮಾಡಿದಾನೆ. ನೀನು ಹುಡುಗರನ್ನು ಹೊಡೆಯುತ್ತೀಯಂತೆ. ಅದೂ ಬೆತ್ತದಿಂದ. ಹಾಗಿದ್ದರೆ ಆ ಚಟವನ್ನು ಬಿಡು. ಹುಡುಗರನ್ನು ಎಂದೂ ಹೊಡೆಯಬೇಡ. ಕ್ರಾಸ್ಬೀ ಬರೆದ 'ಟಾಲಸ್ಟಾಯೆ-ಶಿಕ್ಷಕ' ಎಂಬ ಪುಸ್ತಕ ನಮ್ಮ ಭಾಂಡಾರದಲ್ಲಿದೆ.

ಅದನ್ನೊಂದು. ಹೊಡೆದರೆ ಹುಡುಗರು ಬುದ್ಧಿವಂತರಾಗುವುದಿಲ್ಲವೆಂಬ ಮಾತು ಈಗ ಸಿದ್ಧವಾಗಿದೆ. ಹೊಡೆದು ಹೊಡೆದೇ ಪಾಠಕಲಿಸುವ ರೂಢಿ ಇದ್ದವರಿಗೆ ಇದು ಕಷ್ಟ; ನಾನು ಬಲ್ಲೆ. ಇದು ಒಬ್ಬ ಗೋಲಂದಾಜ ಸಿಪಾಯಿಯ ಅನುಭವದ ಹಾಗೆ. ಗುಂಡಿನ ಹೊರತು ಜಗತ್ತಿನಲ್ಲಿ ಏನೂ ಕೆಲಸವಾಗದು ಅನಿಸುತ್ತದೆ ಅವನಿಗೆ. ಆಗುತ್ತದೆ ಎಂಬದನ್ನು ಸಿದ್ಧಮಾಡ ಲಿಕ್ಕೆ ಎಂತಲೇ ನಾವು ಇರುವುದು. ಹುಡುಗರ ವಿಷಯದಲ್ಲೂ ಹಾಗೆಯೇ.

ಚೆನ್ನಾಗಿ ನಿದ್ದೆಮಾಡು. ಮನುಷ್ಯನಿಗೆ ಅನ್ನಕ್ಕಿಂತ ನಿದ್ದೆ ಹೆಚ್ಚಾಗಿ ಬೇಕು. ಅನ್ನದ ಉಪವಾಸ ಮೈಗೊಳ್ಳಿಯದು. ನಿದ್ದೆಯ ಉಪವಾಸ ದಿಂದ ಮೈ ಸವೆಯುತ್ತದೆ. ಮಿದುಳಿಗೆ ಭ್ರಾಂತಿ ಹತ್ತಿ, ಮನುಷ್ಯ ಅಸ್ವಸ್ಥ ನಾಗುತ್ತಾನೆ. ಆದ್ದರಿಂದ ನಿದ್ದೆಯ ವಿಷಯದಲ್ಲಿ ಅಜಾಗರೂಕತೆ ಕೂಡದು. ರಾತ್ರಿ ಒಂಭತ್ತರಿಂದ ಮುಂಜಾನೆ ನಾಲ್ಕರ ತನಕ ಗಾಢನಿದ್ರೆ ಬಂದರೆ ಸರಿ, ನನ್ನ ಆಕ್ಷೇಪಣೆಯಿಲ್ಲ.

೩೦–೧೧–೩೦

**ಬಾಪೂನ ಆಶೀರ್ವಾದ.**

## ೯

ನಿನ್ನ ಕಾಗದ. ಹುಡುಗರ ಶಿಕ್ಷೆಯ ವಿಷಯ ತಿಳಿಯಿತು. ನಿನ್ನ ತರ್ಕ ಹಳೆಯದೇ. ಇದು ವೃಕ್ಷಬೀಜನ್ಯಾಯದ ಮೂಲಕ. ನಿನಗೆ ಏಟಿನಿಂದ ಬುದ್ಧಿಬಂತು ಎಂದು ನೀನು ಹುಡುಗರನ್ನು ಹೊಡೆಯ ಬೇಕಲ್ಲವೆ ? ಹುಡುಗರು ದೊಡ್ಡವರಾದ ಮೇಲೆ ಇದನ್ನೇ ಕಲಿಯು ತ್ತಾರೆ. ಇಂಥ ತರ್ಕವನ್ನೇ ಹೂಡಿ ಜನ ಹಿಂಸಾವಾದಕ್ಕೆ ಶರಣು ಹೋಗು ತ್ತಾರೆ. ಈ ಅಸತ್ಯಾನುಭವವನ್ನು ದಾಟಿ ಹೋಗುವುದು ನಮ್ಮ ಕೆಲಸ. ಅದಕ್ಕೆ ಕಲಿತನಬೇಕು; ನಾನು ಒಪ್ಪುತ್ತೇನೆ. ಆ ಕಲಿತನವನ್ನು ಒಡಮೂಡಿಸಲಿಕ್ಕೆಂದೇ ನಾವೆಲ್ಲ ಒಟ್ಟಿಗೆ ಸೇರಿದ್ದೇವೆ. ಹುಡುಗರಿಗೆ ಓದು ಕಲಿಸುವುದು, ಶಿಸ್ತು ತರುವುದು ಮಾತ್ರವೇ ನಮ್ಮ ಗುರಿಯಲ್ಲ. ಅವರನ್ನು ಗುಣವಂತರಾಗಿ ಮಾಡಬೇಕು. ಅದಕ್ಕಾಗಿಯೆ ಶಿಕ್ಷಣ, ಶಿಸ್ತು, ಎಲ್ಲಾ. ಅವರನ್ನು ಗುಣವಂತರಾಗಿ ಮಾಡಬೇಕಾದರೆ ಶಿಸ್ತಿನ

ಕಡೆ ಅಸಡ್ಡೆಯಾದರೂ, ಶಿಕ್ಷಣ ಬದಿಗೆ ಸರಿದರೂ ಏನೂ ಅಡ್ಡಿಯಿಲ್ಲ. ನಿನ್ನ ಅಭಿಪ್ರಾಯ ನನಗೆ ತಿಳಿಯಿತು. ಹೊಡೆಯುವಾಗ ನಿನಗೆ ದ್ವೇಷ ಬುದ್ಧಿಯಿಲ್ಲ; ಗೊತ್ತಾಯಿತು. ಆದರೂ ಅದರಲ್ಲಿ ರೊಚ್ಚು, ಹೇಡಿತನ ಇವೆ. ನಿನಗೊಂದು ಸಲಹೆ ಕೊಡುತ್ತೇನೆ. ಹುಡುಗರದೊಂದು ಸಭೆ ಸೇರಿಸು. ಅವರಲ್ಲಿ, ನಾವು ದೊಂಬಿ ಮಾಡಿದರೆ, ಮಾತು ಕೇಳದಿದ್ದರೆ, ನಮಗೆ ಹೊಡೆಯಿರಿ, ಹೀಗೆ ಹೀಗೆ ಹೊಡೆಯಿರಿ ಎಂದು ಹೇಳಿದವರನ್ನು ಮಾತ್ರ ಹೇಳಿದ ರೀತಿಯಲ್ಲಿ ಹೊಡೆ. ಹೊಡೆಯಬೇಡವೆಂದವರನ್ನು ಹೊಡೆಯಬೇಡ. ಹಾಗೆ ಮಾಡಿದರೆ ಹೊಡೆಯುವ ಅಗತ್ಯವೇ ಇಲ್ಲ ಎಂಬದು ನಿನಗೆ ಕಂಡುಬಂದೀತು. ಈ ವಿಷಯವಾಗಿ ಚರ್ಚೆಮಾಡು. ಆತುರದಿಂದಾಗಲಿ ನಿರಾಶೆಯಿಂದಾಗಲಿ ಬಿಟ್ಟುಬಿಡಬೇಡ. ನಾನು ಹೇಳಿದುದು ನಿನ್ನ ಮನಸಿಗೆ ಸರಿಯೆನಿಸದಿದ್ದರೆ ನಿನ್ನ ಹಾದಿಯನ್ನೇ ನೀನು ತುಳಿ. ನೀನು ಸತ್ಯದ ಪೂಜಾರಿ; ನಾನು ಬಲ್ಲೆ. ಕೊನೆಯಲ್ಲಿ ನಿನಗೆ ಸತ್ಯ ದೊರೆತೇ ದೊರೆತೀತು.

೧೪-೧೨-೩೦

ಬಾಪೂನ ಆಶೀರ್ವಾದ.

## ೧೦*

ನೀನೇ ಮಗು ಎಂದು ಭಾವಿಸಿ ನಿನಗೆ ಪ್ರಾರ್ಥನೆಯ ಬಗ್ಗೆ ಉತ್ತರ ಹೇಳುತ್ತೇನೆ. ನಿನ್ನನ್ನು ಹುಟ್ಟಿಸಿದ ತಂದೆತಾಯಿಗೆ ಅವರ ತಾಯಿತಂದೆ ಇದ್ದ ಹಾಗೆ, ಆ ಪರಂಪರೆ ಬೆಳೆಸಿದರೆ ಕಟ್ಟಕಡೆಗೆ ಇಡೀ ಸೃಷ್ಟಿಯ ತಂದೆ ಒಬ್ಬನಿರಬೇಕಲ್ಲವೆ ? ಅವನೇ ದೇವರು. ಅದಕ್ಕೇ ಅವನನ್ನು ಸೃಷ್ಟಿಕರ್ತ ಎನ್ನುತ್ತಾರೆ. ನಾವು ಹೇಳದೆಯೆ ನಮ್ಮ ಇಚ್ಛೆ ಎಷ್ಟೋ ಸಲ ನಮ್ಮ ತಾಯಿತಂದೆಗೆ ತಿಳಿಯುವದಿಲ್ಲವೆ ? ದೇವರ ವಿಷಯಯವೂ ಹಾಗೆಯೆ. ನಮ್ಮ ತಾಯಿತಂದೆಗೇ ಇಷ್ಟು ಇಂಗಿತ ತಿಳಿದುಕೊಳ್ಳುವ ಶಕ್ತಿಯಿದ್ದರೆ

* ಹುಡುಗರಿಗೆ ಪ್ರಾರ್ಥನೆ ಸವಿಯಾಗುವಂತೆ ಒಂದು ಪತ್ರರೂಪೀಪ್ರವಚನ ಕಳಿಸಿ ಎಂದು ಕೇಳಿದುದಕ್ಕೆ ಇದು ಉತ್ತರ.

ಇಡೀ ಜಗತ್ತಿಗೇ ತಂದೆಯಾದ ದೇವರಿಗೆ ಎಷ್ಟು ಶಕ್ತಿಯಿರಬೇಡ? ಅಂತಲೇ, ನಾವು ದೇವರನ್ನು ಅಂತರ್ಯಾಮಿ ಎಂದು ತಿಳಿಯುತ್ತೇವೆ. ಅವನನ್ನು ಪ್ರತ್ಯಕ್ಷವಾಗಿ ನೋಡಬೇಕೆನ್ನುವ ಅಗತ್ಯವೇನೂ ಇಲ್ಲ. ನಿನ್ನ ಬಳಗದ ಎಷ್ಟೋ ಜನರನ್ನು ನೀನು ನೋಡಿರಲಿಕ್ಕಿಲ್ಲ. ಯಾರಾದರೊಬ್ಬರ ತಂದೆತಾಯಿ ಪರದೇಶಕ್ಕೆ ಹೋಗಿದ್ದರೆ, ತೀರಿಕೊಂಡಿದ್ದರೆ ಇದರ ಬಗ್ಗೆ ಇತರರು ಹೇಳಿದ್ದನ್ನು ನಂಬುತ್ತೇವೆ, ಅಲ್ಲವೆ? ಹಾಗೆಯೇ ದೇವರ ವಿಷಯದಲ್ಲಿ ಸಾಧುಸಂತರು ಸಾಕ್ಷಿ. ಅವರ ಮೇಲೆ ನಂಬಿಗೆಯಿಟ್ಟು ಅಂತರ್ಯಾಮಿ ಇದ್ದಾನೆಂದು ತಿಳಿಯಬೇಕು. ಅವನು ಇದ್ದುದು ಆದರೆ, ಅವನ ಭಜನೆ ಪ್ರಾರ್ಥನೆ ಮಾಡಬೇಕಾದುದು ಸಹಜ ಎಂದು ತಿಳಿಯುತ್ತದೆ. ನಾವು ಬೆಳಗ್ಗೆ ಎದ್ದಾಗ, ರಾತ್ರಿ ಮಲಗುವಾಗ ತಂದೆತಾಯಿಗೆ ನಮಸ್ಕರಿಸುತ್ತೇವೆ. ದೇವರಿಗೂ ಹಾಗೆಯೇ ಮಾಡಬೇಕು. ಅಲ್ಲದೆ ನಮ್ಮ ಮನಸಿನೊಳಗಿನ ಇಚ್ಛೆಯನ್ನು ತಂದೆತಾಯಿಗೆ ಹೇಳುವ ಹಾಗೆಯೆ ದೇವರಿಗೆ ಹೇಳಬೇಕು. ಈ ಹೊತ್ತಿಗೆ ಇಷ್ಟು ಸಾಕಷ್ಟೆ!

ಇದರಲ್ಲಿ ನಿನ್ನ ಮನಸಿಗೆ ಹಿಡಿಯದುದು ಏನಾದರೂ ಇದ್ದರೆ ಬರೆದು ತಿಳಿಸು.

೨೬-೧೨-೩೦

ಬಾಪೂನ ಆಶೀರ್ವಾದ.

## ೧೧

ಮನಸು ತೆರವಿದ್ದಾಗ ಹುಡುಗರ ವಿಚಾರ ಬರುತ್ತವೆ. ಡಿಸೆಂಬರ್ ೨೩ ನೆ ತಾರೀಖು, ದಿನಗಳೊಳಗೆಲ್ಲ ಕಿರಿದು ಎಂಬದು ಹುಡುಗರಿಗೆ ಗೊತ್ತಿರಲಾರದು. ಇದನ್ನು ತಿಳಿಸುವಾಗ ಅವರಿಗೆ ಭೂಗೋಲಜ್ಞಾನ ಮಾಡಿ ಕೊಡಬಹುದು. ನೀನು ಹಾಗೆ ಮಾಡಬಲ್ಲೆಯಲ್ಲವೆ? ಕಿರಿಯದಿನದ ಬಗ್ಗೆ ಹೇಳುವಾಗ ಹಿರಿಯದಿನದ ವಿಷಯ, ಒಂದೇ ತರದ ದಿನಗಳ ವಿಷಯ; ಅದರ ಜೊತೆಯಲ್ಲಿ ಋತುಗಳ ಮಾತು; ಕ್ರಿಸ್‌ಮಸ್ ಎಂದರೇನು ಎಂಬದು ಎಲ್ಲಾ ಹೇಳು. ಈ ಬಗೆಯಾಗಿ ಹೇಳಿದ ವಿಷಯದಲ್ಲಿ

ಹೇಳುವವರಿಗೂ ಕೇಳುವವರಿಗೂ ರುಚಿ ಹುಟ್ಟುವಂತಿರಬೇಕು. ಇದೇ ರೀತಿ ದೇಶೀ ಪದ್ಧತಿಯ ಮಗ್ಗಿ ಬಾಯಿಲೆಕ್ಕ. ಅವನ್ನು ಹುಡುಗರು ಆಡಾಡುತ್ತ ಕಲಿಯಬಹುದು. ಹೀಗೆಯೇ ಸಾಮಾನ್ಯವಾಗಿ ವನಸ್ಪತಿ ಶಾಸ್ತ್ರವೂ ಗಮನಕ್ಕೆ ಬರುತ್ತದೆ. ನನಗಂತೂ ಅದರಲ್ಲಿ ಪ್ರವೇಶವಿಲ್ಲ. ನಿನಗೇನಾದರೂ ಸ್ವಲ್ಪ ಗೊತ್ತಿದ್ದೀತು. ಇಲ್ಲದಿದ್ದರೆ ಸಾಮಾನ್ಯಜ್ಞಾನಕ್ಕೆ ಎಷ್ಟು ಬೇಕೋ ಅಷ್ಟು ನೀನು ಕಲಿತು, ಅವರಿಗೆ ಕಲಿಸು. ನನಗೂ ಅಂಚೆಯದ್ವಾರಾ ಕಲಿಸು. ಕಲಿಕಲಿಯುತ್ತ ಕಲಿಸಬೇಕು. ಇದು ನಿನ್ನ ಮನಸಿಗೆ ಭಾರವೆನಿಸಬಾರದು. ಹೀಗೆ ಮಾಡಿದರೆ ಹುಡುಗರದೂ ನನ್ನದೂ, ಇಬ್ಬರದೂ ಕೆಲಸವಾದೀತು. ಹುಡುಗರಿಗೆ ನಾವೇನು ಕೊಡಬೇಕೋ ಅದನ್ನು ಕೊಡುತ್ತಾ ಇಲ್ಲ ಅನಿಸುತ್ತಿದೆ ನನಗೆ. ಸಹಜ ಪ್ರಯತ್ನದಿಂದ ಕೊಡಬಹುದಾದುದನ್ನಾದರೂ ಕೊಡೋಣವಲ್ಲ.

೧–೧–೩೧

**ಬಾಪೂನ ಆಶೀರ್ವಾದ.**

## ೧೨

ನಿನ್ನ ಕಾಗದ ಬಂತು. ವಿವೇಕಾನಂದ,......ರು ಹೇಳುವುದು ನನಗೆ ತಿಳಿದ ಮಟ್ಟಿಗೆ ಏಕಪಕ್ಷೀಯ. ಹೇಳುವವರಿಗೆ ತಾವು ಹೇಳುವಂತೆ ಮನಸಿಗನಿಸಬೇಕು. ಸೂರದಾಸ, ತುಲಸೀದಾಸಾದಿಭಕ್ತರು ತಮ್ಮನ್ನು ತಾವು ಶಠಿ, ಕಾಮಿ ಎಂದುಕೊಂಡಿದಾರೆ. ಅವರಂದದ್ದು ಬರೀ ಮೇಲುಪಚಾರದ ಮಾತಲ್ಲ, ಒಳಗಿನ ದನಿಯ ಉದ್ಗಾರ. ನಿಜವಾದ ಮಾತೆಂದರೆ, ನಮ್ಮಲ್ಲಿ ಎರಡೂ ತರದ ಭಾವನೆ ಇವೆ. ಅಮೂರ್ಛಸ್ಥಿತಿಯಲ್ಲಿ ಮನುಷ್ಯನಿಗೆ ತಾನೇ ಬ್ರಹ್ಮನೆಂದು ಭಾಸವಾಗುತ್ತದೆ. ಮೂರ್ಛಿತಾವಸ್ಥೆಯಲ್ಲಿ ಆ ದಯಾವಂತನೆದುರಿಗೆ ನಾವು ದೀನರಂತೆ ಕಾಣುತ್ತದೆ. ಯಾರಿಗೆ ತಾವು ದೀನರೆನಿಸುವುದಿಲ್ಲವೋ, ಯಾರಿಗೆ ತಾವೇ ಬ್ರಹ್ಮ ಎನಿಸುತ್ತದೆಯೋ ಅವರು ಕರುಣೆ ಬೇಡುವ ಭಜನೆ ಹಾಡರು. ಅಂಥವರು ಕೋಟಿಗೊಬ್ಬರು ಕೂಡ ಸಿಗುವುದಿಲ್ಲ. ನಮ್ಮ ಅಲ್ಪತ್ವವನ್ನು ತಿಳಿಯುವುದು ಶ್ರೇಷ್ಠತೆಯ ಮಹಾಮಂತ್ರ. ಕಡಲ ಹನಿ ಬೇರೆ ಬೇರೆ ಸಿಡಿದು ನಾನೇ ಕಡಲು,

ನಾನೇ ಕಡಲು ಎಂದರೆ ಓಣಗಿ ಹೋದೀತು. ಆದರೆ ತಾನು ಹನಿ ಎಂಬುದನ್ನು ಅರಿತರೆ ಕಡಲಿಗೆ ಹರಿಯುತ್ತ ಹರಿಯುತ್ತ ಕಡಲಲ್ಲಿ ಲೀನವಾದೀತು.

Culture ಎಂದರೆ ( ಸಂಸ್ಕೃತಿ ) ಸಂಸ್ಕಾರಿತೆ. Education ಎಂದರೆ ಸಾಹಿತ್ಯಜ್ಞಾನ. ಸಾಹಿತ್ಯಜ್ಞಾನ ಬರೀ ಸಾಧನೆ. ಸಂಸ್ಕಾರಿತೆಯೇ ಗುರಿ. ಸಾಹಿತ್ಯಜ್ಞಾನವಿಲ್ಲದೆಯೆ ಸಂಸ್ಕೃತಿ ಬರಬಹುದು. ಚಲೋ ಸಂಸ್ಕಾರವುಳ್ಳ ಮನೆಯಲ್ಲಿ ಹುಟ್ಟಿದ ಮಗುವಿಗೆ ಸಹಜವಾಗಿಯೆ ಒಳ್ಳೆ ಸಂಸ್ಕೃತಿ ಬರುತ್ತದೆ. ಇಂದಿನ ಶಿಕ್ಷಣ-ಸಂಸ್ಕೃತಿಗಳಲ್ಲಿ ಸ್ವಲ್ಪವೂ ತಾಳಮೇಳವಿಲ್ಲ. ಇಂಥ ಶಿಕ್ಷಣ ಪಡೆದರೂ ಜನರಲ್ಲಿ ಕೊಂಚಮಟ್ಟಿಗೆ ಸಂಸ್ಕೃತಿ ಉಳಿದಿದೆ. ಇದರಿಂದ, ನಮ್ಮ ಸಂಸ್ಕೃತಿಯ ಬೇರು ಬಹಳ ಆಳವಾಗಿ ವ್ಯಾಪಿಸಿದೆ ಎಂಬದು ತಿಳಿಯುತ್ತದೆ.

೫-೧-೩೧

**ಬಾಪೂನ ಆಶೀರ್ವಾದ.**

## ೧೩

ನಿನ್ನ ಕಾಗದ ಬಂತು. ನನ್ನ ಪ್ರೀತಿಯ ಶ್ಲೋಕಗಳು ಇವು ಎಂದು ಒಂದು ಸಲ ಹೇಳಿದ್ದೆ-'ಮಾತ್ರಾಸ್ಪರ್ಶಾಸ್ತು ಕೌಂತೇಯ' ಇತ್ಯಾದಿ. ಈಗ ಹಾಗೆ ನಿರ್ಧಾರವಾಗಿ ಹೇಳಲಾರೆ. ಮನಸ್ಸಿನ ರೀತಿಯಂತೆ ಆಯಾ ಕಾಲಕ್ಕೆ ಅಂಥಂಥ ಶ್ಲೋಕ ಪ್ರೀತಿಯವಾಗುತ್ತವೆ. ಇಂಥದ್ದರಲ್ಲಿ ನನಗೆ ಈಗ ಸಂತೋಷವಿಲ್ಲ. ನನಗೆ ಇಡೀ ಗೀತೆ ಪ್ರಿಯವಾಗಿ ಕಾಣುತ್ತದೆ. ಅದು ತಾಯಿಯಿದ್ದಂತೆ. ತಾಯಿಯ ಅಂಗಾಂಗಗಳಲ್ಲಿ ಯಾವುದು ಪ್ರಿಯವೆಂದು ಕೇಳಿದರೆ ಮಗು ಏನು ಹೇಳೀತು ? ಅವನಿಗೆ ತಾಯಿ ಪ್ರಿಯಳು.

ಒಂದೆರಡು ದಿನ ತುಂಬ ಥಳಿಯಾಗಿತ್ತು. ಈಗ ಅಷ್ಟಿಲ್ಲ. ನಾಲ್ಕೂ ಕಡೆ ಗೋಡೆಯಿವೆ ಎಂದು ಹಾಗನಿಸುತ್ತಿರಬಹುದು. ನಾವಿಬ್ಬರೂ ಬಯಲಲ್ಲೇ ಮುಗಿಲ ಕೆಳಗೆ ಮಲಗುತ್ತೇವೆ.

ರೋಲಾ ಬಗ್ಗೆ ಪ್ರಾರ್ಥನೆಯಾದದ್ದು ಚಲೋದೇ. ನನ್ನ ಆತನ

ಸಂಬಂಧ ಒಂದು ಕಡೆ ಸರಿಸಿದರೂ ಆತನ ಸ್ವಂತ ನಿರ್ಮಲತೆ ಬಹಳ ಹೆಚ್ಚಿನದು.

೧೧-೧-೩೦

**ಬಾಪೂನ ಆಶೀರ್ವಾದ.**

## ೧೪

ನನ್ನ ಧೈರ್ಯ ಎಷ್ಟು ನೋಡು! ಅಥವಾ ಹಿಂದುಸ್ತಾನದ ಭಾಷೆಗಳ ಮೇಲೆ ನನ್ನ ಪ್ರೀತಿಯೆಷ್ಟು? ಎಷ್ಟೇ ತಪ್ಪಾಗಿದ್ದರೂ ಅದನ್ನು ಮರಾಠಿ ಯೆಂದೇ ಹೇಳುತಾರೆ, ಅಲ್ಲವೆ? ಆದರೆ ನಿನಗೆ ಮರಾಠೀ ಬರೆಯಬೇಕಾದರೆ ಇನ್ನೂ ಕೆಲವು ಕಾಲ ಬೇಕು......

ವನಸ್ಪತಿಯ ಬಗ್ಗೆ ದಿನಬಳಕೆಯ ಜ್ಞಾನ ನಿನಗೆ......ರಿಂದ ಸಿಗಬಹುದು. ನಮ್ಮ ಹುಡುಗರಿಗೆ ಆಶ್ರಮದಲ್ಲಿರುವ ಗಿಡಗೆಂಟೆಗಳನ್ನು ಗುರುತಿಸಲು ಬರಬೇಕು. ಅವು ಹುಟ್ಟುವುದು ಹೇಗೆ, ಅವಕ್ಕೆ ವಯ ಸ್ಸೆಷ್ಟು, ಯಾವಾಗ ಅವು ಹಣ್ಣು ಬಿಡುತ್ತವೆ-ಇದೆಲ್ಲ ಅವರಿಗೆ ತಿಳಿಯ ಬೇಕಲ್ಲವೆ. ನನಗೇನೋ ಅದು ಗೊತ್ತಿಲ್ಲ.

ಆಹೊತ್ತು ಇಲ್ಲಿ ಅರ್ಧದಿನ ರಜೆ ಇರದಿದ್ದರೆ ಅದು ಸಂಕ್ರಾಂತಿಯ ದಿನ ಎಂಬದು ತಿಳಿಯುತಿರಲಿಲ್ಲ ನನಗೆ. ನಿನ್ನ ಎಳ್ಳು ಸಕ್ಕರೆ ತಲುಪಿತು. ನಮಗೆ ಈಗಂತೂ ದಿನವೂ ಸಂಕ್ರಾಂತಿಯೇ.

Hero ಎಂದರೆ ಪೂಜನೀಯವ್ಯಕ್ತಿ, ದೇವತೆ. ರಾಜಕೀಯದಲ್ಲಿ ಗೋಖಲೆ ನನಗೆ Hero. ನನ್ನ ಇಡೀ ಬಾಳಿನ ಮೇಲೆ ತಮ್ಮ ಪ್ರಭಾವ ಮೂಡಿಸಿದವರು ಟಾಲಸ್ಟಾಯ್, ರಸ್ಕಿನ್, ಥೋರೋ, ರಾಯಚಂದ ಭಾಯಿ. ಥೋರೋನನ್ನು ಬಿಟ್ಟರೂ ಪ್ರಾಯಶಃ ಒಳ್ಳೆಯದೆ.

ಜಗತ್ತಿನ ಎಲ್ಲ ಕ್ರಾಂತಿಗಳಿಗೂ ಮಹಾಪುರುಷರೇ ಮೂಲಕಾರಣ ವಿದ್ದಂತೆ ಕಾಣುತ್ತದೆ. ನಿಜವಾಗಿ ನೋಡಿದರೆ ಜನರೇ ಅದರ ಮುಖ್ಯ ಕಾರಣ. ಕ್ರಾಂತಿಯೇನು ಅಕಸ್ಮಾತ್ತಾಗಿ ಆಗುವುದಿಲ್ಲ. ಗ್ರಹಗಳು ಹೇಗೆ ನಿಯಮಿತವಾಗಿ ಚಲಿಸುತ್ತವೆಯೋ ಕ್ರಾಂತಿಯೂ ಹಾಗೆಯೆ.

ಆ ಚಲನದ ನಿಯಮ ನಮಗೆ ಅರ್ಥವಾಗದು. ಆದ್ದರಿಂದ ಒಮ್ಮೊಮ್ಮೆ ನಮಗೇ ಏನೋ ಬದಲಾದಂತೆ ಅನಿಸುತ್ತದೆ.

೧೭–೧–೩೧

ಬಾಪೂನ ಆಶೀರ್ವಾದ.

## ೧೫

ನಿನ್ನ ಎರಡೂ ಪತ್ರ ಬಂದಿವೆ. ಕಹಿಮದ್ದನ್ನು ನಾನು ಕುಡಿಸದಿದ್ದರೆ ಮತ್ತಾರು ಕುಡಿಸಬಲ್ಲರು? ಅದನ್ನು ಕುಡಿದರೆಯೇ ಆರೋಗ್ಯ ರಕ್ಷಣೆ. ಮೈಗಿಂತ ಮನಸಿನ ಆರೋಗ್ಯ ಹೆಚ್ಚು ಅಗತ್ಯ.

ಬೋರ್ಸದ್, ೬–೭–೩೧

ಬಾಪೂನ ಆಶೀರ್ವಾದ.

## ೧೬

ನಿನ್ನ ಕಾಗದ. ನಿನ್ನದು ಇದು ಎಷ್ಟನೆಯ ಹುಟ್ಟಿದ ಹಬ್ಬವೋ ನೀನು ತಿಳಿಸಿಲ್ಲ. ನನಗದು ಗೊತ್ತಿರಬೇಕಿತ್ತು: ನಿಜ. ಆದರೆ ಇಂಥಗರಲ್ಲಿ ನಾನು ಪೂರಾ ಹೆಡ್ಡ. ದೀರ್ಘಾಯುವಾಗು ಎಂದು ಆಶೀರ್ವಾದ ಮಾಡುವ ಬದಲು ಬೇಗನೆ ನಿರ್ವಿಕಾರ, ನಿರ್ದೋಷಿ ಆಗಿ ಆದರ್ಶ ಸೇವಿಕೆಯಾಗು ಎನ್ನುತ್ತೇನೆ. ನೀನೂ ಪ್ರಯತ್ನ ಮಾಡುತ್ತಲೇ ಇದ್ದೀಯೆ. ನಿನಗೆ ಸಫಲತೆ ದೊರೆಯಲಿ.

ನಿನ್ನ ಕಾಗದದಲ್ಲಿ ಎರಡೂ ತರದ ಬಣ್ಣ ಕಾಣಿಸುತ್ತದೆ. ಅದರಲ್ಲಿ ಸ್ಪಷ್ಟತನ ಇದೆ; ಅದು ನನಗೆ ಒಗ್ಗುತ್ತದೆ. ಆದರೆ ಅದರಲ್ಲಿ ರೋಷ, ಅಭಿಮಾನವೂ ಇದೆ. ಅದನ್ನೀಗ ಪೃಥಕ್ಕರಣ ಮಾಡುತ್ತ ಕೂಡುವುದಿಲ್ಲ. ......ನೀನು ಇದುವರೆಗೆ ನಿನ್ನ ದಿನಚರಿಯಲ್ಲಿ ಬರೆಯದಿದ್ದರೆ ಇನ್ನು ಮುಂದೆ ಬರೆ. ದಿನವೂ ಯಾರ ಮೇಲೆ ಸಿಟ್ಟುಮಾಡಿದೆ, ಯಾರನ್ನು ಹೊಡೆದೆ, ಯಾರನ್ನು ಕೆಣಕಿ ಮಾತಾಡಿದೆ? ನನಗಾಗಿ ಇಷ್ಟು ಬರೆದರೆ ಸಾಕು. ಉಳಿದ ವಿಷಯ ನೀನುಂಟು, ......ಅವರುಂಟು. ನಿನ್ನ ಕೆಲಸದಲ್ಲಿ ನಾನು ಕೈ ಹಾಕುವುದಿಲ್ಲ. ಅದು ನನ್ನ ಕ್ಷೇತ್ರದ ಹೊರಗಿನದು. ನನಗೆ ಅದು ತಿಳಿಯುವುದೂ ಇಲ್ಲ. ನನಗೆ ಪಂಚಾಯತಿ ಮಾಡಲು

ಬರುವುದಿಲ್ಲ. ಅಂಥ ಸಲಕರಣೆಯೂ ನನಗಿಲ್ಲ. ನಾನೇ ತಂದೆತಾಯಿ ಆಗಿದ್ದೇನೆ. ನಾನು ಹೇಳಿದ್ದು ಒಂದು ಪಕ್ಷದ್ದಾದೀತು. ಅಲ್ಲದೆ ಸತ್ಯಾಗ್ರಹಿಗೆ ನ್ಯಾಯಬೇಕಾಗಿಲ್ಲ. ನ್ಯಾಯ ಎಂದರೆ ಮುಯ್ಯಿಗೆ ಮುಯ್ಯಿ. ಸತ್ಯಾಗ್ರಹ ಎಂದರೆ ಶಠಂ ಪ್ರತಿ ಸತ್ಯಂ; ಹಿಂಸೆಗೆ ಪ್ರತಿ ಅಹಿಂಸೆ, ಕ್ರೋಧಕ್ಕೆ ಇದಿರು ಅಕ್ರೋಧ, ಅಪ್ರೇಮದ ಬದಲು ಪ್ರೇಮ. ಇದರಲ್ಲಿ ನ್ಯಾಯನಿರ್ಣಯಕ್ಕೆ ಎಲ್ಲಿದೆ ಸ್ಥಾನ ?

ಬಾರ್ಡೋಲಿ, ೨೬–೭–೩೨

**ಬಾಪೂನ ಆಶೀರ್ವಾದ.**

### ೧೭

ನಿನ್ನ ಕಾಗದ. ನಿನಗೆ ಬೇಕಾದದ್ದೆಲ್ಲ ಬರೆಯಲು ನನಗೆ ಸಾಧ್ಯವಿಲ್ಲ.*

ರೋಮ್‌ನಲ್ಲಿ ಚಿತ್ರಕಲೆಯನ್ನು ನೋಡಿ ಅದರ ಸೊಬಗನ್ನು ಸವಿದೆ. ಆದರೆ ಎರಡೇ ತಾಸು ನೋಡಿ ಏನಭಿಪ್ರಾಯ ಕೊಡಲಿ ? ನನ್ನ ಶಕ್ತಿ ಎಷ್ಟು, ನನ್ನ ಅನುಭವವೆಷ್ಟು? ಅದರಲ್ಲಿ ಕೆಲಕೆಲವಂತೂ ಬಹಳ ರುಚಿಸಿದವು. ಅಲ್ಲೇ ಎರಡು ತಿಂಗಳು ಕಾಲ ಇರುವುದು ಸಾಧ್ಯವಾದರೆ ದಿನವೂ ಆ ಚಿತ್ರ, ಆ ವಿಗ್ರಹ ನೋಡಿ ನೋಡಿ ಮೆಲ್ಲನೆ ಅದರ ಅಭ್ಯಾಸವನ್ನೂ ಮಾಡೇನು. ವಧಸ್ತಂಭದ ಮೇಲಿನ ಯೇಸುವಿನ ಪ್ರತಿಮೆಯನ್ನು ನೋಡಿದೆ. ನನ್ನ ಮನಸ್ಸನ್ನು ಬಹಳವಾಗಿ ಸೆಳೆದದ್ದು ಅದೇ. ಈ ಮಾತು ಮೊದಲೇ ಬರೆದಿದ್ದೆ. ಅಲ್ಲಿನ ಕಲೆ ಹಿಂದುಸ್ಥಾನದ ಕಲೆಗಿಂತ ಉಚ್ಚತರ ಎಂದು ನನ್ನ ಅಭಿಪ್ರಾಯವಲ್ಲ. ಎರಡೂ ಬೇರೆ ಬೇರೆ ರೀತಿಯಲ್ಲಿ ಬೆಳೆದಿವೆ. ಹಿಂದುಸ್ಥಾನದ ಕಲೆಯಲ್ಲಿ ಕಲ್ಪನೆ ತುಂಬಿದೆ. ಅದರಲ್ಲಿ ನಿಸರ್ಗಾನುಕರಣ. ಈ ಕಾರಣದಿಂದ ಪಶ್ಚಿಮದ ಕಲೆ. ತಿಳಿದುಕೊಳ್ಳಲು ಪ್ರಾಯಶಃ, ಸುಲಭವಿದ್ದೀತು. ಆದರೆ ಅರ್ಥಮಾಡಿಕೊಂಡಂತೆಲ್ಲ ಪಶ್ಚಿಮದ ಕಲೆ ನೆಲಕ್ಕೇ ನಮ್ಮನ್ನು ಅಂಟಿಸಿಡುತ್ತದೆ ಎನಿಸಿದರೆ ಹಿಂದುಸ್ತಾನದ

* ಯುರೋಪಿನ ಪ್ರವಾಸದಲ್ಲಿ ನೋಡಿದ ಸ್ಥಳಗಳ ವರ್ಣನೆ ಬರೆಯಿರಿ ಎಂದು ಕೇಳಿದ ಪ್ರಶ್ನೆಗೆ ಉತ್ತರ.

ಕಲೆ ತಿಳಿದುಕೊಂಡ ಹಾಗೆ ಅಷ್ಟಷ್ಟು ಮೇಲೆ ಮೇಲೆ ಒಯ್ಯುತ್ತದೆ. ಇದೆಲ್ಲ ನಿನ್ನಂಥವಳಿಗೆ ಹೇಳುವ ಪೂರ್ತಿಯೇ ವಿನಾ ನಾನು ಈ ವಿಚಾರ ಗಳಿಗೆ ಏನೂ ಬೆಲೆಕೊಡುವದಿಲ್ಲ. ನನಗೆ ಹಿಂದುಸ್ಥಾನದ ಬಗ್ಗೆ ಇರುವ ಪಕ್ಷಪಾತ ಹೀಗೆ ಹೇಳಿಸುತ್ತಿರಬೇಕು; ಇಲ್ಲವೆ ನನ್ನ ಅಜ್ಞಾನ ನನ್ನನ್ನು ಕಲ್ಪನೆಕುದುರೆಯ ಮೇಲೆ ಕೂಡಿಸಿರಬೇಕು. ಅಂಥ ಕುದುರೆ ಹತ್ತಿದವನಿಗೆ ಕಡೆಗೆ ಬೀಳುವುದು ತಪ್ಪದಲ್ಲವೆ? ಹೀಗಿದ್ದರೂ ಇದರಲ್ಲಿ ನಿನಗೇನಾದರೂ ಪ್ರಯೋಜನವಿದ್ದರೆ ಸರಿ. ನೀನು ಇಂಥ ವಿಷಯ ದಾಟಿ ಹೋಗಿದ್ದರೆ ಇದನ್ನು ಬಿಸಾಡು. ತಮಗಿಂತ ತಿಳುವಳಿಕೆ ಕಡಮೆಯಾದ ತಮ್ಮ ಮಕ್ಕಳಿಗೆ, ತಾಯಿತಂದೆ ರಾಮಾಯಣ ಭಾರತದ ಕತೆಗಳನ್ನು ತಮ್ಮ ಮನಸಿಗೆ ಬಂದ ಹಾಗೆ ಹೇಳುತ್ತಾರೆ. ನಾನೂ ಹಾಗೆಯೆ ಎಂದು ತಿಳಿ. ಇದರಿಂದ ಇಷ್ಟು ತಿಳಿಯುತ್ತದೆ. ನನಗೂ ಕಲೆಯಲ್ಲಿ ಒಲವಿದೆ, ನಿಜ. ಆದರೆ ಇಂಥವು ಎಷ್ಟೋ ರುಚಿಗಳನ್ನು ನಾನು ತ್ಯಾಗಮಾಡಿದ್ದೇನೆ. ತ್ಯಾಗಮಾಡಬೇಕಾಗಿ ಬಂದಿದೆ. ಸತ್ಯಶೋಧನೆಯಲ್ಲಿ ಸಿಕ್ಕ ರಸವನ್ನು ನಾನು ಹೊಟ್ಟೆತುಂಬ ಕುಡಿದಿದ್ದೇನೆ. ದೊರೆತರೆ ಇನ್ನೂ ಕುಡಿಯಲು ಸಿದ್ಧ. ಸತ್ಯದ ಪೂಜಾರಿಗೆ ಎಲ್ಲವೂ ಸಹಜ ಪ್ರಾಪ್ತಪ್ರವೃತ್ತಿ. ಸ್ವಾಭಾವಿಕವಾಗಿ ಅವನು ಗೀತೆಯ ತೃತೀಯಾಧ್ಯಾಯವನ್ನು ಅನುಸರಿಸುವವನಾಗಿರುತ್ತಾನೆ. ಮೂರನೆಯ ಅಧ್ಯಾಯ ಓದುವ ಮೊದಲೇ ನಾನು ಕರ್ಮಯೋಗವನ್ನು ಆರಂಭಿಸಿದೆ ಎಂದು ತಿಳಿದಿದ್ದೇನೆ. ಇರಲಿ, ಇದು ವಿಷಯಾಂತರ.

ಆಶ್ರಮದ ವಿಷಯ ಕೇಳಿದ್ದೀಯೆ. ಆಶ್ರಮದಲ್ಲಿ ಉದ್ಯೋಗವೇ ಪ್ರಧಾನ. ಶರೀರಶ್ರಮ ಮನುಷ್ಯನ ಧರ್ಮ. ಶರೀರವನ್ನು ದುಡಿಸದವನು ಕಳವಿನ ಅನ್ನ ತಿಂದಂತೆ. ಅಲ್ಲದೆ, ಆಶ್ರಮದಲ್ಲಿನ ಉದ್ಯೋಗ ಸ್ವಹಿತಕ್ಕಿದ್ದಷ್ಟೇ ಪರಮಾರ್ಥಕ್ಕೂ ಅನುಕೂಲ. ರಾಟೆ ಅದರ ಮಧ್ಯಬಿಂದು. ಬೇಸಾಯವನ್ನು ಬಿಟ್ಟರೆ ಹಿಂದುಸ್ಥಾನದ ಕೋಟ್ಯಾನು ಕೋಟಿ ಜನರಿಗೆ ನೆರವಾಗುವ ಕಸಬೆಂದರೆ ಇದೇ. ಇದರಿಂದ ಧರ್ಮ, ಅರ್ಥ ಎರಡೂ ಸಾಧಿಸಬಹುದು. ಬರೀ ದೇಶಸೇವೆಗಾಗಿಯೇ ಅಲ್ಲ




‘ಹೃದಯ ಕುಂಜ’ ಸಾಬರಮತಿ ಆಶ್ರಮದಲ್ಲಿ ಗಾಂಧೀಜಿಯ ಗುಡಿಸಲು

ಆಶ್ರಮ, ದೇಶಸೇವೆಯ ಮೂಲಕ ಜಗತ್ಸೇವೆಗಾಗಿ; ಜಗತ್ಸೇವೆಯ ಮೂಲಕ ಮೋಕ್ಷಸಾಧನೆಗಾಗಿ, ಮೋಕ್ಷಸಾಧನೆಯಿಂದ ಈಶ್ವರ ದರ್ಶನಕ್ಕಾಗಿ.

ಬಂದಬಂದವರನ್ನೆಲ್ಲ ಆಶ್ರಮಕ್ಕೆ ಸೇರಿಸಲಾಗುವುದಿಲ್ಲ. ಅಂಗ ವಿಹೀನರಿಗಾಗಿ ಅಲ್ಲ ಆಶ್ರಮ. ಅನಾಥಾಲಯವೂ ಅಲ್ಲ. ಅದು ಸೇವಕ–ಸೇವಿಕೆಯರಿಗಾಗಿ, ಸಾಧಕರಿಗಾಗಿ ಇದೆ. ಆದುದರಿಂದ ಶರೀರಶ್ರಮ ಸಾಧ್ಯವಿಲ್ಲದವರಿಗೆ ಅಲ್ಲಿ ಸ್ಥಳವಿಲ್ಲ. ಸೇವಾಭಾವದಲ್ಲಿ ಲೀನರಾದ ಸೇವಾಸಕ್ತರು ಹೆಳವರಾದರೂ ಅವರಿಗೆ ಸ್ಥಳವಿದೆ. ಆದರೆ ಹಾಗೆ ಕೆಲವರನ್ನು ಮಾತ್ರ ತೆಗೆದುಕೊಳ್ಳಬಹುದು. ಆಶ್ರಮಕ್ಕೆ ಸೇರಿದ ಮೇಲೆ ಹೆಳವರಾದರೆ ಅವರನ್ನು ತೆಗೆದು ಹಾಕುವುದಿಲ್ಲ. ಹೊರಗಿನಿಂದ ನೋಡಿದರೆ ಆಶ್ರಮದ ಅನೇಕ ಕೆಲಸಗಳಲ್ಲಿ ವಿರೋಧಾಭಾಸ ಕಾಣುತ್ತದೆ. ಒಳಗಿನಿಂದ ನೋಡಿದರೆ ಆ ಆಭಾಸ ಇರದು. ಇಷ್ಟರ ಮೇಲೆ ನಿನಗೆ ಅರ್ಥವಾಗದಿದ್ದರೆ ಮತ್ತೆ ಕೇಳು. ಮತ್ತೇನಾದರೂ ಸಂಶಯವಿದ್ದರೆ ನನಗೆ ತಿಳಿಸು.

ವಿಲಾಯತಿಯಲ್ಲಿ ಕೆಲವು ಸಲ ನಾನು ಫೋಟೋ ತೆಗೆಸಿಕೊಳ್ಳಬೇಕಾಯಿತು. ಅದರಿಂದ ನನ್ನ ವ್ರತ ಭಂಗವಾಗಲಿಲ್ಲವೆಂದು ನನಗನಿಸುತ್ತದೆ.

ನನ್ನ ಸಹವಾಸದಲ್ಲಿರುವವರೆಲ್ಲರೂ ನನ್ನಂತೆಯೆ ಆಗಬೇಕು ಎಂದೇನೂ ಅಲ್ಲ. ಅದು ಇಷ್ಟವೂ ಅಲ್ಲ. ಅದು ಬರೀ ಮಕ್ಕಿಕಾಮಕ್ಕಿ. ನನ್ನಲ್ಲಿ ಇರುವ ಒಳ್ಳೆಯ ಗುಣದಲ್ಲಿ ಎಷ್ಟು ಸಾಧ್ಯವೋ ಅಷ್ಟು ತೆಗೆದುಕೊಳ್ಳುವುದೇ ಒಳಿತು. ಸರದಾರರು * ಚಹಾ ಕುಡಿಯುತ್ತಾರೆ. ಅದಕ್ಕೆ ಯಾರ ಅಡ್ಡಿ? ಅವರಿಗೆ ಔಷಧದ ಹಾಗೆ ಉಪಯೋಗವಾಗುತ್ತಿದ್ದರೆ? ನನ್ನ ಜೊತೆಯಲ್ಲಿರುವ ಸಂಗಾತಿಗಳಲ್ಲಿ ಕೆಲವರು ಮಾಂಸಾಹಾರಿಗಳೂ ಇದ್ದಾರೆ. ಅವರನ್ನೇನು ಮಾಡಲಿ? ಯಾರಿಗೆ ಚಹಾ ಬೇಡವೋ, ಯಾರು ಚಹಾದ ಮೂಲೇತಿಹಾಸವನ್ನು ತಿಳಿದುಕೊಂಡು ಅದನ್ನು ಬಿಡುತ್ತಾರೋ ಅವರು ಬಿಡಲಿ. ನನ್ನ ಜೊತೆಯಲ್ಲಿದ್ದೂ ಕೂಡ ಬಾ ‡

* ಸರದಾರ ಪಟೇಲರು ಆಗ ಗಾಂಧೀಜೀಯ ಜೊತೆಗೆ ಯರವಡಾದಲ್ಲೇ ಇದ್ದರು.

‡ ಕಸ್ತೂರಬಾ

ಚಹಾನೂ ಕುಡಿಯುತ್ತಾಳೆ, ಕಾಫೀನೂ ಕುಡಿಯುತ್ತಾಳೆ. ಆಕೆಗೆ ನಾನು ಪ್ರೀತಿಯಿಂದ ಚಹಾ ಮಾಡಿಕೊಟ್ಟರೂ ಕೊಟ್ಟೇನು. ನೀನು ಕೇಳಿದ ಪ್ರಶ್ನೆ ಏನೋದಕ್ಕಾಗಿ, ನನಗೆ ಗೊತ್ತು. ಇಂಥ ವಿಷಯದಲ್ಲಿ ನಮಗೆ ಸ್ವಲ್ಪ ತಪ್ಪುತಿಳುವಳಿಕೆ, ಸ್ವಲ್ಪ ಅಸಹನೆ ಇರುತ್ತವೆ. ಅದನ್ನು ಕಿತ್ತು ಹಾಕುವುದು ಅವಶ್ಯಕ. ನಿನ್ನಲ್ಲಿ ಆ ದೋಷ ಇದೆಯೋ ಇಲ್ಲವೋ ನಾನರಿಯೆ. ಆದರೂ ಈ ವಿಷಯದಲ್ಲಿ ನನ್ನ ಅಭಿಪ್ರಾಯ ನಿನಗೆ ತಿಳಿದಿರುವುದು ಒಳಿತು.

ಯರವಡಾ ಮಂದಿರ, ೨೫-೧-೩೨

**ಬಾಪೂನ ಆಶೀರ್ವಾದ.**

### ೧೮

ನಿನ್ನ ಕಾಗದ ಬಂತು. ನಾನು ತಂದ ಪುಸ್ತಕದ ಪೆಟ್ಟಿಗೆ ಅಲ್ಲಿಗೆ ಮುಟ್ಟಿತೇ? ವಿದ್ಯಾಪೀಠದಲ್ಲಿ ಯಾರಾದರೂ ಇದಾರೆಯೇ? ಪುಸ್ತಕಗಳನ್ನೆಲ್ಲ ಓರಣವಾಗಿ ಇಟ್ಟಿದಾರೋ, ಇಲ್ಲವೆ ಎಲ್ಲಾ ಅವ್ಯವಸ್ಥೆಯಾಯಿತೋ? ಮಾಸಪತ್ರಿಕೆಗಳೂ ತೆಗೆದಿಡುವ ಹಾಗಿರುತ್ತವೆ. ಪುಸ್ತಕಗಳನ್ನು ಓರಣಮಾಡಲಿಕ್ಕೆ ಪೂರಾ ಸಮಯ ಕೆಲಸ ಮಾಡುವ ಒಬ್ಬ ಮನುಷ್ಯ ಬೇಕು. ಅವನ ಕೈಕೆಳಗೆ ಇನ್ನೂ ಇಬ್ಬರು ಬೇಕು. ಇಲ್ಲದಿದ್ದರೆ ಇಂಥ ದೊಡ್ಡ ಪುಸ್ತಕಸಂಗ್ರಹವನ್ನು ಬೆಳೆಸಲೇ ಬಾರದು. ಇದು ವಿದ್ಯಾಪೀಠದವರದೇ ಕೆಲಸ ಎಂದು ತಿಳಿಯಬೇಕು. ಅದು ನಮ್ಮ ಕೆಲಸವಲ್ಲ. ಅಲ್ಲವೆಂದೇ ವಿದ್ಯಾಪೀಠ ತೆಗೆದದ್ದು. ಇಲ್ಲದಿದ್ದರೆ ಆಶ್ರಮವನ್ನೇ ವಿದ್ಯಾಪೀಠವಾಗಿ ಮಾಡಬಹುದಾಗಿತ್ತು. ಆ ಕ್ಷೇತ್ರ ಆಶ್ರಮದ್ದಲ್ಲವೇ ಅಲ್ಲ. ಆಶ್ರಮದ ಕೆಲಸ ಮುಖ್ಯವಾಗಿ ಆಂತರಿಕವಾದುದು. ವಿದ್ಯಾಪೀಠದ ಕೆಲಸ ಮುಖ್ಯವಾಗಿ ಬಾಹ್ಯದ್ದು. ಹಾಗೇ ಇರಬೇಕು. ಎರಡರದೂ ಉದ್ದೇಶ ಒಂದೇ, ಪ್ರವೃತ್ತಿ ಬೇರೆ. ಆದ್ದರಿಂದ ಆಶ್ರಮದಲ್ಲಿ ಅಗತ್ಯವಿದ್ದಷ್ಟು ಮಾತ್ರವೇ ಪುಸ್ತಕಗಳನ್ನು ಇಡಬೇಕು. ಓದಬೇಕೆನಿಸಿದರೆ ವಿದ್ಯಾಪೀಠದಿಂದ ತರಬೇಕು. ಇದೆಲ್ಲ ಮಾತು ಕೆಲಸ ಪ್ರಾರಂಭಿಸಿದಾಗ. ಈಗೇನೊ ಎಲ್ಲಾ ಮಹಾಪೂರದಲ್ಲಿ ಕೊಚ್ಚಿಕೊಂಡು ಹೋಗುತ್ತಿದೆ.

ಸರಿಯಾಗಿಯೇ ಇದೆ. ಮಹಾಪೂರ ಇಳಿದ ಮೇಲೆ ಕನ್ನಡಿಯಂಥ ತಿಳಿ ನೀರು ವಿಸ್ತಾರವಾಗಿ ತಳದಲ್ಲಿ ನಿಲ್ಲುತ್ತದೆಯಲ್ಲವೆ?

ನಾಗಪಂಚಮಿ ಉತ್ಸವ ನನಗೆ ನೆನಪಿದೆ. ಆಗ ನಾನು ಕೊಟ್ಟ ಉತ್ತರವೇ ಈಗಲೂ. ಪಟಾಕಿ ಹಾರಿದಂತೆ ತಲೆ ಒಡೆಯುತ್ತಿವೆ ಎಂದು ನಾನು ಉಪಮಾನ ಕೊಟ್ಟಿದ್ದೆ. ಆತ್ಮದ ಗುಣ ಬಲ್ಲವರು ಇದನ್ನು ಅಕ್ಷರಶಃ ಒಪ್ಪಿಕೊಂಡಾರು. ಆತ್ಮಕ್ಕೆ ಮರಣವಿಲ್ಲದಿದ್ದರೆ ಅದರ ಗೂಡು ಮುರಿದರೆ, ವೇಷ ಹರಿದರೆ, ಸುಟ್ಟರೆ ಕೊಳೆತರೆ ಕೆಟ್ಟದ್ದೇನು? ಆತ್ಮ ಸದಾ ಪೂರ್ಣವಾಗಿದೆ. ಅದಕ್ಕೆ ಹೊಸ ಗೂಡು, ವೇಷಕ್ಕೆ ಕೊರತೆಯಿಲ್ಲ. ಆತ್ಮಜ್ಞಾನವುಂಟಾದರೆ ಅವುಗಳ ಅವಶ್ಯಕತೆಯೂ ಇಲ್ಲ. ಆದರೆ ಇವೆಲ್ಲ ಸ್ವಾನುಭವದಿಂದ ತಿಳಿದುಕೊಳ್ಳಬೇಕಾದುದು. ಆದುದರಿಂದ ಎಲ್ಲಿಯ ತನಕ ತಲೆ ಒಡೆಯುತ್ತವೆಯೋ ಅಲ್ಲಿಯ ತನಕ ಪಟಾಕಿಯೆಂತಲೇ ತಿಳಿಯ ಬೇಕು. ಆತ್ಮಕ್ಕೆ ಸ್ವ-ಪರಭೇದವುಂಟೇ ಎಂದು ಕೇಳಬೇಡ. ದೇಹ ಇರುವ ತನಕ ಸ್ವ-ಪರಭೇದ ಸ್ವಲ್ಪಮಟ್ಟಿಗಾದರೂ ಇದ್ದೇ ಇರುತ್ತದೆ. ಹೀಗೆ ತಿಳಿಯದೆ ಬೇರೆ ಹಾದಿಯಿಲ್ಲ. ನಾವು ಸತ್ತಂತೆ ಈ ಭೇದ ಕಳೆಯುತ್ತ ಹೋಗುತ್ತದೆ. ಪರರು ಅನಿಸಿದವರನ್ನೆಲ್ಲ ಕೊಲ್ಲುತ್ತ ಹೋದರೆ ಈ ಭೇದ ಬೆಳೆದೀತು. ಈ ಮಾತು ಎಷ್ಟೆಷ್ಟು ಅರ್ಥವಾಗುತ್ತದೆಯೋ ಅಷ್ಟಷ್ಟು ಮಟ್ಟಿಗೆ ಹುಡುಗರೂ ಹಾದಿಗೆ ಬರುತ್ತಾರೆ. ಅದಕ್ಕೆ ಸೈರಣೆ ತುಂಬಾ ಅಗತ್ಯ. ಈ ವಿಷಯವಾಗಿ ನಾನು ಮಕ್ಕಳಿಗೆ ಬರೆದ ಕಾಗದ ನೋಡು.

೩೦-೧-೩೨

**ಬಾಪೂನ ಆಶೀರ್ವಾದ.**

## ೧೯

ನಿನ್ನ ಕಾಗದ ಬಂತು.

ಸರದಾರರು ನಿಜವಾಗಿಯೂ ಚಹಾ ಬಿಟ್ಟುಬಿಟ್ಟಿದಾರೆ. ಬೆಳಗಿನ ಹೊತ್ತು ಕುಡಿಯುವುದನ್ನು ನಿಲ್ಲಿಸಿದ್ದರು; ನನಗೆ ತಿಳಿದಿತ್ತು. ಆದರೆ ಹತ್ತುಗಂಟೆಗೆ ಕುಡಿಯುತ್ತಿದ್ದರು. ಈಗ ಅದನ್ನೂ ಬಿಟ್ಟುಬಿಟ್ಟಿದಾರೆ.

ಬಿಟ್ಟಮೇಲೆ ನನಗೆ ತಿಳಿಯಿತು. ನಾನು ಒಂದು ಅಕ್ಷರವಾದರೂ ಹೇಳ ಲಿಲ್ಲ; ಅವರೇ ಸ್ವಯಂ ಇಷ್ಟಪಟ್ಟು ಬಿಟ್ಟಿದಾರೆ.

ವಿರೋಧಾಭಾಸ ವಿಷಯ ಹೀಗೆ. ನನ್ನ ಜೀವನದಲ್ಲಿ, ಆಶ್ರಮ ಜೀವನದಲ್ಲಿ ವಿರೋಧಾಭಾಸ ಕಾಣುವ ಕಡೆಯಲ್ಲಿ ಅವಿರೋಧವನ್ನು ತೋರಿಸಲಿಕ್ಕೆ ಬಂದೀತು. ಚಳಿಗಾಲದಲ್ಲಿ ಹೊದೆಯುವುದು, ಬೇಸಗೆಯಲ್ಲಿ ಬರಿಮೈಯಲ್ಲಿರುವುದು-ಇದರಲ್ಲಿ ಸ್ಪಷ್ಟವಾಗಿಯೆ ವಿರೋಧಾಭಾಸವಿದೆ. ಆದರೆ ಹಾಗೆ ಮಾಡುವವನು ಒಂದೇ ನಿಯಮನ್ನನುಸರಿಸಿ ಅದನ್ನೂ ಇದನ್ನೂ ಮಾಡುತ್ತಾನೆ. ಇಂಥ ಎಷ್ಟೋ ವಿರೋಧಾಭಾಸಗಳನ್ನು ಬಿಡಿಸಬಹುದು. ಉಳಿದ ವಿರೋಧಗಳು ವಿರೋಧಗಳೇ ಸರಿ. ಅದಕ್ಕೆ ಕಾರಣ ನನ್ನ, ಆಶ್ರಮದ ದೌರ್ಬಲ್ಯ. ಇವನ್ನು ದೋಷವೆಂದೇ ತಿಳಿಯ ಬೇಕು; ಅವನ್ನು ದೂರಮಾಡಬೇಕು. ನಿಜವಾದ ವಿರೋಧ ಯಾವುದು, ಬರೀ ಆಭಾಸಯಾವುದು ಎಂಬುದು, ಒಂದು ಪಟ್ಟಿ ಮಾಡಿದರೆ ತಾನೇ ತಿಳಿಯುತ್ತದೆ. ನಿನಗೆ ವಿರೋಧ ಎನಿಸಿದ್ದರ ವಿಷಯವಾಗಿ ಏನಾದರೂ ಕೇಳುವುದಿದ್ದರೆ ಕೇಳು.

ಕಾರಣವಿಲ್ಲದೆ ಯಾರೂ ದ್ವೇಷಮಾಡರು. ದ್ವೇಷಮಾಡುವಂಥ ಕಾರಣಕ್ಕೆ ಒಬ್ಬರು ಅವಕಾಶಕೊಟ್ಟರು. ಆದರೂ ನಾವು ದ್ವೇಷಿಸ ಬಾರದು, ಪ್ರೀತಿಸಬೇಕು. ಅವರ ವಿಷಯದಲ್ಲಿ ಕರುಣೆ ತಳೆದು ಸಾಧ್ಯ ವಿದ್ದಷ್ಟೂ ಅವರ ಸೇವೆಮಾಡಬೇಕು. ಒಲವಿಗೆ ಒಲಿಯುವುದು ಪ್ರೇಮ ವಲ್ಲ, ಅದು ವ್ಯವಹಾರ. ಅಹಿಂಸೆಯನ್ನು ಒಂದು ಬಗೆಯ ದಾನ ಎನ್ನ ಬಹುದು. ಪ್ರೀತಿಗೆ ಪ್ರತಿ ಪ್ರೀತಿ,-ಕೊಟ್ಟ ಸಾಲ ತೀರಿಸಿದಂತೆ.

ಯರವಡಾ ಮಂದಿರ, ೫-೨-೩೨

**ಬಾಪೂನ ಆಶೀರ್ವಾದ.**

**೨೦**

ಕಾಗದ ತಲುಪಿತು. ನನ್ನ ಕಾಗದ ತಡವಾಗಿ ತಲಪಿದರೆ, ಲಕೋ ಟೆಯ ಮೇಲಿನ ಮುದ್ರೆಯ ತಾರೀಖನ್ನು ಬರೆದು ತಿಳಿಸು. ಕಿಷನ್‌ಗೆ ಎಷ್ಟು ಶಿಕ್ಷೆಯಾಯಿತು? ಎಲ್ಲಿಟ್ಟಿದಾರೆ?

* * * *

ನಾನು ಬರೆದುದರಲ್ಲಿ ಆಶ್ರಮಕ್ಕೂ ಶಿಕ್ಷಣಕ್ಕೂ ಸಂಬಂಧವಿಲ್ಲ ಎಂದು ಯಾವ ವಾಕ್ಯಕ್ಕೆ ನೀನು ಅರ್ಥಮಾಡಿಕೊಂಡೆ. ನನ್ನ ಮನಸಿನಲ್ಲಿದ್ದದ್ದು ಇದು. ಆಶ್ರಮದಲ್ಲಿ ಅಕ್ಷರಜ್ಞಾನಕ್ಕೆ, ಹೊರಗಿನ ಶಿಕ್ಷಣಕ್ಕೆ ಗೌಣಸ್ಥಾನ. ಆದ್ದರಿಂದಲೇ ಅದು ವಿದ್ಯಾಪೀಠವಾಗಲಿಲ್ಲ. ಹೊರಗಿನ ಶಿಕ್ಷಣದ ಅಗತ್ಯವಿದೆ; ಅದು ಉಪಯುಕ್ತವೂ ಹೌದು. ಅಂತಲೇ ವಿದ್ಯಾಪೀಠವನ್ನು ಪ್ರಾರಂಭಿಸಿದ್ದು. ಎರಡೂ ಒಂದಕ್ಕೊಂದು ಪೂರಕ. ಹೀಗೆ ಕ್ಷೇತ್ರಮರ್ಯಾದೆ ಇರುವುದರಿಂದ ಆಶ್ರಮದ ಪುಸ್ತಕಸಂಗ್ರಹಕ್ಕೂ ಒಂದು ಮಿತಿಬೇಕು. ವಿದ್ಯಾಪೀಠಕ್ಕೆ ಮೇರೆ ಇರಲಾರದು. ಆಂತರಿಕ ಪ್ರಯೋಗದ ವಿಷಯದಲ್ಲಿ ಮಾತ್ರ ಅದರ ಮೇರೆ ಕಟ್ಟಿದೆ. ಆಶ್ರಮದ ಹೆಸರು ಬೆಳೆಯಿತು; ಅದರ ವಿಷಯವಾಗಿ ಉತ್ಪ್ರೇಕ್ಷೆಯ ಕಲ್ಪನೆ ಹರಡಿದವು; ಬೇರೆ ಬೇರೆ ಭಾಷೆಯ ಪುಸ್ತಕ ಎಷ್ಟೋ ಕಾಣಿಕೆಯಾಗಿ ಆಶ್ರಮಕ್ಕೆ ಬರುತ್ತವೆ. ಇವನ್ನೆಲ್ಲ ಇಡಲಿಕ್ಕೆ ವಿದ್ಯಾಪೀಠವೇ ಸ್ಥಳ. ನಾವು ಮಾಡುವ ಅಭ್ಯಾಸಕ್ಕೆ ಉಪಯೋಗವಾಗುವ ಪುಸ್ತಕಗಳು ಮಾತ್ರವೇ ಆಶ್ರಮದಲ್ಲಿರಬೇಕು. ಅಂಥ ಪುಸ್ತಕ ಯಾವುವು? ನೀನೂ ಉಳಿದವರೂ ಸಹಜವಾಗಿ ಹೇಳಬಹುದು. ನಿರ್ಧರಿಸಲಿಕ್ಕೆ ಕಷ್ಟವಾದರೆ ನನಗೆ ಬರೆ. ಆದರೆ ಕಷ್ಟವಾಗುವ ಕಾರಣವೇ ಇಲ್ಲ. ಇಷ್ಟು ವರ್ಷ ಆಶ್ರಮವಾಸವಾದ ಮೇಲೆ ಎಂಥ ಪುಸ್ತಕ ನಮಗೆ ಅಗತ್ಯ ಎಂಬುದನ್ನು ಹೇಳಲಿಕ್ಕೆ ಬರಬಹುದು. ಹೆಚ್ಚಿಗೆ ಬೇಕಾದರೆ ವಿದ್ಯಾಪೀಠದಿಂದ ಎರವು ತಂದರಾಯಿತು. ಎರಡೂ ಸಂಸ್ಥೆ ಬೇರೆ ಬೇರೆ ಎಂದು ತಿಳಿಯುವ ಕಾರಣವಿಲ್ಲ. ಎರಡರ ಕ್ಷೇತ್ರವೂ ಬೇರೆ ಬೇರೆ; ಆದರೆ ಎಷ್ಟೋ ಸಾಮ್ಯವಿದೆ. ಆ ಸಾಮ್ಯ ಬೆಳೆಯುತ್ತಿದೆ.

ಯಾರ ವಿಷಯದಲ್ಲಿಯಾದರೂ ನನ್ನ ಮನಸ್ಸು ಆಸಕ್ತಿಗೊಂಡಿದ್ದರೂ ಅವರ ವಿರುದ್ಧವಾದ ಮಾತು ಕತೆ ಕೇಳಲಿಕ್ಕೆ ಅಡ್ಡಿಯಿಲ್ಲ; ಕೇಳುತ್ತೇನೆ. ಆದರೆ ಅದರಿಂದ ಮನಸ್ಸು ಬದಲಾಗದು. ಅವಲೋಕನಾನಂತರ ರೂಪುಗೊಂಡ ಅಭಿಪ್ರಾಯ ತಟ್ಟನೆ ಬದಲಾಗುವುದು ದೋಷವೆಂದೇ ನಾನು ತಿಳಿಯುತ್ತೇನೆ. ಎಂದಿಗೂ ಮನಸ್ಸು ಬದಲು ಮಾಡೆನೆಂಬ ಹಟ.

ಮನ ಬದಲಾಗಲು ಏನಾದರೂ ಪ್ರಬಲ ಕಾರಣ ಬೇಕು. ಅನೇಕ ವೇಳೆ ಪ್ರತ್ಯಕ್ಷ ಪ್ರಮಾಣ ಅಗತ್ಯವೆಂದು ತೋರುತ್ತದೆ. ಈ ಸ್ವಭಾವವನ್ನು ನಾನು ದೃಢಪಡಿಸಿಕೊಂಡಿದ್ದೇನೆ. ಅದರಿಂದ ಎಷ್ಟೋ ಭೀತಿಯಿಂದ ಪಾರಾದೆ. ಇದರಿಂದ ಇತರರೊಡನೆ ನನ್ನ ಸಹವಾಸ ನಿರ್ಮಲವಾಗಿ ಉಳಿದಿದೆ. ಅಂತೇ ನಿನಗೇನಾದರೂ ಕೇಳುವುದಿದ್ದರೆ ಸ್ಪಷ್ಟವಾಗಿ ಕೇಳು. ಇಂಥ ಸುಸಂಧಿ ಮತ್ತೆ ಸಿಗಲಿಕ್ಕಿಲ್ಲ.

ನಿನ್ನ ನಿದಾನ ಸರಿ. ಯಂಗ್ ಇಂಡಿಯಾದಲ್ಲಿ ಬರೆಯುವ ವ್ಯಕ್ತಿ ಬೇರೆ; ಆಶ್ರಮದಲ್ಲಿ ಎಲ್ಲರಿಗೂ ಪರಿಚಯವಾಗಿರುವ ವ್ಯಕ್ತಿ ಬೇರೆ. ಯಂಗ್ ಇಂಡಿಯಾಕ್ಕೆ ಬರೆಯುವಾಗ ನಾನು ಸದ್ಗುಣಿ ಆಗಿ ಕೂಡು ತ್ತೇನೆ. ಆಶ್ರಮದಲ್ಲಿ, ನಾನು ಹೇಗಿದ್ದೇನೋ ಹಾಗೆಯೆ ಕಾಣಿಸದೆ ಇರು ವುದು ಹೇಗೆ? ಅಲ್ಲದೆ ನಾನು ಸತ್ಯದ ಪೂಜಾರಿ. ತಿಳಿದೂ ತಿಳಿದೂ ತಪ್ಪು ಮುಚ್ಚಿಡುವುದು ನನ್ನಿಂದ ಸಾಧ್ಯವಿಲ್ಲ. ಆ ಕಾರಣದಿಂದ ನನ್ನಲ್ಲಿರುವ ಕೆಟ್ಟಗುಣವೆಲ್ಲ ಹೊರಬಿದ್ದೇ ಬೀಳುತ್ತವೆ. ನನ್ನೊಳಗೆ ಸದಾ ದೇವಾಸುರ ಯುದ್ಧ ನಡೆದಿದೆ; ಹೀಗೆ ನೀನು ಹೇಳಿದೆಯಲ್ಲವೆ. ಅದರಲ್ಲಿ ದುಷ್ಟಗುಣದ ಕೌರವರೇ ಸೋಲುತ್ತಾರೆ ಎನಿಸುತ್ತದೆ ನನಗೆ. ಈ ವಿಷಯವಾಗಿ ಈಗಲೇ ಏನೂ ನಿಶ್ಚಯವಾಗಿ ಹೇಳಲಿಕ್ಕೆ ಬಾರದು. ಸೋಲನ್ § ಹೇಳಿದಂತೆ- ಸತ್ತಮೇಲೆಯೆ ಇದನ್ನು ಹೇಳಲು ಬಂದೀತು. ಲಕ್ಷಾಧಿಪತಿಗಳು ಒಂದೇ ಗಳಿಗೆಯಲ್ಲಿ ಭಿಕ್ಷಾಧಿಪಗಳಾದದ್ದು ನಾನು ಕಣ್ಣಾರೆ ನೋಡಿದೇನೆ. ಆದ್ದರಿಂದ ಯಾವತೆರದ ಹೆಮ್ಮೆಯೂ ನನಗಿಲ್ಲ. ಹೆಮ್ಮೆಗೊಂಡರೆ ತಾನೆ ಏನು ಲಾಭ?

ಯರವಡಾ ಮಂದಿರ, ೧೪-೨-೩೨

**ಬಾಪೂನ ಆಶೀರ್ವಾದ.**

೨೧

ನಿನ್ನ ಕಾಗದ ಚೆನ್ನಾಗಿದೆ. ಸ್ಪಷ್ಟತನದಿಂದ ಬರೆದಿದೀಯೆ. ಬಹಳ ಚಲೋ ಆಯಿತು. ನೀನು ಮಾಡಿದ ಟೀಕೆಗೆ ಉತ್ತರ ಇದು. ಆಯಾ

---

§ ಒಬ್ಬ ಗ್ರೀಕ್ ತತ್ವಜ್ಞಾನಿ. ಮರಣದ ತನಕ ಮನುಷ್ಯರ ಬೆಲೆ ಕಟ್ಟಬೇಡ ಎಂದು ಅವನ ನೀತಿ.

ಜನರು ಅದರ ಬಗ್ಗೆ ಏನು ಹೇಳುತ್ತಾರೋ ಕೇಳದೆ ಆ ಪ್ರಸಂಗಗಳ ವಿಷಯವಾಗಿ ನಾನೇನು ಹೇಳಲಿ. ಆದರೆ ಸ್ಥೂಲವಾಗಿ ಇಷ್ಟು ಹೇಳ ಬಹುದು. ಎಲ್ಲೆಲ್ಲಿ ವಿಶೇಷ Privilege – ಸ್ವಾತಂತ್ರ್ಯ – ಕೊಟ್ಟಿದೆಯೋ ಅಲ್ಲಿ ಅಗತ್ಯವೆಂದು ಕೊಟ್ಟಿದೆ. ಸೋಮಾರಿತನಕ್ಕಾಗಿ ಆ ಸ್ವಾತಂತ್ರ್ಯ ಕೊಟ್ಟಿಲ್ಲ; ಅವರ ಸ್ವಭಾವಕ್ಕೆ, ಮೈಗೆ ಅಗತ್ಯವಿದೆ ಎಂತ ಕೊಟ್ಟದ್ದು. ನಾನು ನ್ಯಾಯಾಧೀಶನಾಗಲಾರೆ. ಅವರು ಮಾಡುವ ಪ್ರಯತ್ನಗಳಾ ದರೂ ನಮಗೆಲ್ಲಿ ಪೂರಾ ಗೊತ್ತಿವೆ? ಹೀಗೆಂದರೆ, ಅವರಲ್ಲಿ ಅಪೂರ್ಣತೆ ಇಲ್ಲವೆಂದಲ್ಲ. ಅಪೂರ್ಣತೆಯಿರದಿದ್ದರೆ ಆಶ್ರಮಕ್ಕೇಕೆ ಬರುತಿದ್ದರು? ಅವರು ಕಪಟಿಗಳಲ್ಲ. ನಾನು ಮಾಡಿದ್ದನ್ನೆಲ್ಲ ಎಲ್ಲರೂ ಮಾಡಬೇಕು, ಎಲ್ಲರೂ ಮಾಡಬಲ್ಲರು; ಹೀಗೆ ತಿಳಿಯುವುದು ಮಹಾದೋಷ. ಭೀಮ ಹೊರುವ ಹೊರೆ ನಾನು ಹೊರುವ ಪ್ರಯತ್ನ ಮಾಡಿದರೆ ಅದೇ ಗಳಿಗೆಗೆ 'ರಾಮ' ಎನ್ನಬೇಕಾದೀತು! ನನ್ನ ಅಶಕ್ತತೆಯನ್ನು ನೋಡಿ ಭೀಮ ನಕ್ಕರೆ ಅದು ತಪ್ಪು ಎನ್ನಬೇಕು.

ನನಗೆ ಮಂದಿ ಮೋಸಮಾಡುತ್ತಾರೆ ಎಂದು ಬಹಳ ಜನ ಹೇಳು ತ್ತಾರೆ. ಮೋಸಮಾಡುವುದಿಲ್ಲ ಎಂದಲ್ಲ. ಆದರೆ ಅನೇಕ ಜನ ಹಾಗೆ ಮಾಡುವುದಿಲ್ಲ. ನನ್ನ ಇದಿರಿನಲ್ಲಿ ನಡೆದಂತೆ ತರುವಾಯ ಅನೇಕರು ನಡೆಯಲಾರರು ಎಂದು ನನಗೆ ಅನುಭವವಾಗಿದೆ. ಇದಕ್ಕಾಗಿ ಎಷ್ಟೋ ಜನ ನನ್ನ ಗೊಡವೆಯನ್ನೇ ಬಿಡುತ್ತಾರೆ. ಹೀಗೆ ಎಷ್ಟೋ ಸಲ ಆಗುತ್ತದೆ ಎಂದು ನನ್ನ ಮೇಲೆ ಆಕರ್ಷಣಶಕ್ತಿಯ ಆಕ್ಷೇಪಣೆ ಹೊರಿಸುತ್ತಾರೆ.

ಇಷ್ಟರಿಂದ ನಿನಗಾಗಲಿ ಉಳಿದವರಿಗಾಗಲಿ ಸಮಾಧಾನವಾಗುವ ಸಂಭವ ಕಡಿಮೆ. ನನ್ನನ್ನು ನಾನು ಉಳಿಸಿಕೊಳ್ಳಲಿಕ್ಕೆ ಹೀಗೆ ಬರೆಯುತ್ತಾ ಇಲ್ಲ. ನನ್ನ ಮನಸಿನ ದಿಕ್ಕನ್ನು ತೋರಿಸಿದ್ದೇನೆ, ಅಷ್ಟೆ. ಅದರಲ್ಲಿನ ಚಲೋ ಮಾತೆಂದರೆ – ಅನೇಕ ವರ್ಷಗಳಿಂದ ನಾನದನ್ನು ಒಪ್ಪಿಕೊಂಡು ನಡೆದಿದ್ದೇನೆ – ಆಶ್ರಮದ ಲೋಪ ನನ್ನ ದೋಷಲೋಪದ ಪ್ರತಿಬಿಂಬ. ಅನೇಕರಿಗೆ ನಾನು ಹೇಳಿದ್ದುಂಟು – ನನ್ನನ್ನು ಭೆಟ್ಟಿಯಾದ ಮಾತ್ರಕ್ಕೆ ನನ್ನ ಗುರುತಾಗದು. ನೋಡಿದವರಿಗೆ ಒಳ್ಳೆಯವನಾಗಿಯೆ ಕಾಣುತ್ತೇನೆ.

ಇಲ್ಲದ ಗುಣವನ್ನು ಕೂಡ ನನ್ನಲ್ಲಿವೆಯೆಂದು ಜನ ಆಡಿಕೊಳ್ಳುತ್ತಾರೆ. ನಾನು ಸತ್ಯದ ಪೂಜಾರಿ. ಆ ಪೂಜೆ ಕ್ಷಣಹೊತ್ತು ಜನರ ಕಣ್ಣು ಕುಕ್ಕಿಸೀತು. ನನ್ನನ್ನು ಗುರುತಿಸಬೇಕಾದರೆ, ನಾನಿಲ್ಲದಾಗ ಆಶ್ರಮ ವನ್ನು ನೋಡಬೇಕು. ಅದರಲ್ಲಿ ಕಾಣುವ ದೋಷವೆಲ್ಲ ನನ್ನ ದೋಷದ ಪಡಿಯಚ್ಚು ಎಂದು ತಿಳಿದರೆ ಕಿಂಚಿತ್ತೂ ಕೂಡ ತಪ್ಪಾಗಲಿಕ್ಕಿಲ್ಲ. ನನಗೆ ಅನ್ಯಾಯ ಮಾಡಿದಂತೆಯೂ ಆಗದು. ಆಶ್ರಮದಲ್ಲಿ ಗುಂಪುಕೂಡಿದ ಜನರನ್ನು ನಾನೇ ಎಳೆದು ತಂದಿದೇನೆ ಎನ್ನಬೇಕು. ಅವರಿಗೆ ಆಶ್ರಮ ದಲ್ಲಿದ್ದೂ ಕೂಡ ತಮ್ಮ ದೋಷವನ್ನು ನಿರ್ಮೂಲನಮಾಡುವುದು ಆಗದಿದ್ದರೆ, ಅಥವಾ ದೋಷಯಾರಲ್ಲಾದರೂ ಬೆಳೆದಿದ್ದರೆ, ಈ ತಪ್ಪು ಅವರದಲ್ಲ ನನ್ನದು. ಇದು ನನ್ನ ಸಾಧನಾಲೋಪ. ಈ ಲೋಪ ನನಗೆ ತಿಳಿದಿಲ್ಲ, ನನಗೆ ಕಾಣುವುದಿಲ್ಲ ಎಂದಲ್ಲ. ಇಷ್ಟು ಮಾತ್ರ ಹೇಳಬಲ್ಲೆ; ಈ ಲೋಪಗಳು ತಿದ್ದುವ ಪ್ರಯತ್ನ ಮಾಡಿದ ಮೇಲೂ ಉಳಿದಿರುವ ಲೋಪ. ನಾನು ಪ್ರಯತ್ನಶೀಲನಾಗಿದೇನೆ ಎಂತಲೇ ಇನ್ನೂ ಆಶ್ರಮ ಮುರಿದುಬಿದ್ದಿಲ್ಲವೆಂದು ನನಗೆ ಅನುಭವವಾಗಿದೆ ಮೂರು ಕಡೆ ಆಶ್ರಮ ತೆರೆದೆ. ಮೂರೂ ಕಡೆಯಲ್ಲಿಯೂ ತಾತ್ಕಾಲಿಕ ಉದ್ದೇಶ ಸಫಲವಾಯಿ ತೆಂದು ನನಗೇ ನಂಬಿಗೆಯಿದೆ. ಈ ನಂಬುಗೆಯ ಬಲದಿಂದ ನಾನು ಆತ್ಮವಂಚನೆಯನ್ನೂ ಮಾಡುವುದಿಲ್ಲ, ಪರವಂಚನೆಯನ್ನೂ ಮಾಡುವು ದಿಲ್ಲ. ನನ್ನದು ಬಹಳ ದೂರದ ಹಾದಿ. ನಡುವೆ ಹಳ್ಳಕೊಳ್ಳ, ಹೊಳೆ ಗುಡ್ಡ ಬೇಕಾದಷ್ಟು. ಏನೇ ಇರಲಿ, ಯಾತ್ರೆ ಪೂರ್ಣಮಾಡಬೇಕು. ಅಲ್ಲದೆ, ಸತ್ಯಶೋಧನೆಯಲ್ಲಿ ನಿಷ್ಫಲತೆ ಇಲ್ಲವೇ ಇಲ್ಲ ಎಂಬುದನ್ನರಿತು ನಾನು ನಿಶ್ಚಿಂತನಾಗಿದ್ದೇನೆ.

ವಿದ್ವಾಂಸರನ್ನು ಸೆಳೆಯಲಿಲ್ಲ ಆಶ್ರಮ; ಈ ಮಾತು ನಿಜ. ನಾನು ನನ್ನನ್ನು ವಿದ್ವಾಂಸನೆಂದು ತಿಳಿದಿಲ್ಲ, ಅದೇ ಅದರ ಕಾರಣ. ಒಬ್ಬರಿಬ್ಬರು ವಿದ್ವಾಂಸರು ಆಶ್ರಮಕ್ಕೆ ಬಂದಿದಾರೆ. ತಮ್ಮ ವಿದ್ವತ್ತನ್ನು ಬೆಳೆಸಲು ಅವರಿಲ್ಲಿಗೆ ಬಂದಿಲ್ಲ. ಬೇರೆ ಏನನ್ನೋ ಬೆಳೆಸಿಕೊಳ್ಳಲು ಬಂದಿದಾರೆ. ಅವರೆಲ್ಲ ಸತ್ಯಶೋಧಕರು, ಸತ್ಯಶೋಧನೆಯನ್ನು ನಿರಕ್ಷರರು ಮಾಡಬೇಕು;

ಹುಡುಗರು, ಮುದುಕರು, ಹೆಂಗಸರು, ಗಂಡಸರು, ಎಲ್ಲರೂ ಮಾಡಬೇಕು. ಅಕ್ಷರಜ್ಞಾನ ಅನೇಕ ಸಲ ಹಿರಣ್ಮಯ ಪಾತ್ರೆಯಂತೆ ಸತ್ಯದ ಮುಖವನ್ನು ಮರೆಮಾಡಿ ಬಿಡುತ್ತದೆ.

ಹೀಗೆ ಹೇಳಿದರೆ ನಾನು ಅಕ್ಷರಜ್ಞಾನವನ್ನು ನಿಂದಿಸುತ್ತೇನೆಂದಲ್ಲ. ಅದಕ್ಕೆ ತಕ್ಕ ಸ್ಥಾನಕೊಡುತ್ತೇನೆ. ಅನೇಕ ಸಾಧನೆಗಳಲ್ಲಿ ಅದೂ ಒಂದು.

ಆಶ್ರಮದ ಪ್ರಾರ್ಥನೆಯಲ್ಲಿ ನಾನು ಸಂಸ್ಕೃತಕ್ಕೆ ಮಹತ್ವ ಕೊಟ್ಟಿದೇನೆ. ಕಾರಣ, ಆಶ್ರಮವಾಸಿಗಳಲ್ಲಿ ಹಿಂದೂ ಜನರೇ ಹೆಚ್ಚು. ಬೇರೆ ನುಡಿಯ ಪ್ರಾರ್ಥನೆಗೆ ದ್ರೋಹವಲ್ಲ ಇದು. ಮಾಡಿಯೂ ಮಾಡುತ್ತೇವಲ್ಲ ಒಮ್ಮೊಮ್ಮೆ. ಮುಸಲ್ಮಾನರು ಹೆಚ್ಚಾಗಿ ಬಂದು ಸೇರಿಸಿದರೆ ಕೊರಾನಿನ ಪಠನೆಯೂ ದಿನಾಲು ನಡೆದೀತು; ನಾನೂ ಅದರಲ್ಲಿ ಪಾಲುಗೊಂಡೇನು. ಇದರಿಂದ ನಿನಗೇನಾದರೂ ಉತ್ತರ ದೊರೆಯಿತೇ ? ಸಮಾಧಾನವಾಯಿತೇನು ? ಆಗದಿದ್ದರೆ ಮತ್ತೆಮತ್ತೆ ಕೇಳು. ಬೇಸರಗೊಳ್ಳುವದಿಲ್ಲ ನಾನು. ನಿನಗೆ ಸಮಾಧಾನವಾಗಲಿ ಎಂಬುದೇ ನನ್ನ ಇಚ್ಛೆ. ನೀನು ಬಳಲಬೇಡ.

ಯರವಡಾ ಮಂದಿರ, ೧೯–೨–೩೨

**ಬಾಪೂನ ಆಶೀರ್ವಾದ.**

## ೨೨

ನಿನ್ನ ಕಾಗದ. ಹೃದಯವನ್ನು ಅಲೆದಾಡಿಸುವಂಥ ಸೂತ್ರರೂಪದ ಕಿಡಿ ನುಡಿಗಳನ್ನು ಬರೆಯಬೇಕೆಂದು ಹೇಳುತ್ತೀಯೆ. ನನ್ನಲ್ಲಿ ತಿಜೋರಿಯಿದ್ದರೆ ಪ್ರತಿವಾರವೂ ಏನಾದರೊಂದು ಅಂಥದನ್ನು ತೆಗೆದು ನಿನಗೆ ಕಳುಹಿಸುತ್ತಿದ್ದೆ. ಆದರೆ ನನ್ನಲ್ಲಿ ಅಂಥದೇನೂ ಇಲ್ಲ. ಆಡಿದ ಮಾತು ತನ್ನಷ್ಟಕ್ಕೆ ತಾನೇ ಬರುತ್ತದೆ. ಹಾಗೆ ಹೊರಬಿದ್ದದ್ದೇ ನಿಜ; ಏಕೆಂದರೆ ಅದು ಜೀವಂತ ನುಡಿ. ಉಳಿದನುಡಿ ಕೃತ್ರಿಮ ವಚನ. ಚಲೋ ಕಂಡರೂ ಅದರ ಪರಿಣಾಮ ಶಾಶ್ವತವಲ್ಲ. ನನ್ನಿಂದ ಕೃತ್ರಿಮವಾದುದು ಏನೂ ಆಗುವದು ಸಾಧ್ಯವಿಲ್ಲ. ವಿಲಾಯತಿಯಲ್ಲಿ ಓದುವಾಗ ಎರಡು

ಸಲ ಅಂಥ ಪ್ರಯತ್ನ ಮಾಡಿದೆ; ಎರಡೂ ಸಲ ಸೋತೆ. ತರುವಾಯ ಅಂಥ ಪ್ರಯತ್ನ ಮಾಡಲೇ ಇಲ್ಲ.

ನುಡಿಯಂತೆ ನನ್ನ ನಡೆಯ ಬಗ್ಗೆಯೂ ಅಷ್ಟೇ. ಮೀರಾ ಬೇನಳ ಬಗ್ಗೆ ನಾವು ಮಾತಾಡಿದ್ದು ನೆನಪಿದೆ. ಆ ಹೊತ್ತಿಗೆ ನನಗೆ ಹೇಗೆ ತೋಚಿತೋ ಹಾಗೆ ಹೇಳಿದ್ದೇನು. ಆ ಉತ್ತರದ ಪ್ರಭಾವ ನಿನ್ನ ಮನಸಿನ ಮೇಲೆ ಒಳಿತಾಗಲಿಲ್ಲವೆಂಬುದು ತಿಳಿಯಿತು. ಅಷ್ಟು ಮಟ್ಟಿಗೆ ನನ್ನ ಅಹಿಂಸೆ ಅಪೂರ್ಣವೇ. ನನಗೆ ಅನಿಸಿದಂತೆ ನಾನು ಹೇಳಿರಬಹುದು. ಆದರೆ ಅದರಲ್ಲಿ ಕಟುಕಿ ಮಾತು ಇದ್ದಂತೆ ಅನಿಸಿತು ನಿನಗೆ. 'ಸತ್ಯಂಬ್ರೂಯಾತ್ ಪ್ರಿಯಂಬ್ರೂಯಾತ್' ಇದು ಕೇವಲ ವ್ಯವಹಾರ ಸೂತ್ರವಲ್ಲ; ಸಿದ್ಧಾಂತ. ಪ್ರಿಯಂ-ಎಂದರೆ ಅಹಿಂಸಕ ಎಂದರ್ಥ. ಆವೇಶದಿಂದ ನಾನು ಹೇಳಿದುದನ್ನೇ ನಮ್ರತೆಯಿಂದ ಹೇಳಿದ್ದರೆ ಈ ಕಟುಪ್ರಭಾವ ನಿನ್ನಲ್ಲಿ ಉಳಿಯುತ್ತಿರಲಿಲ್ಲ. ಅಹಿಂಸಕ ಸತ್ಯ ತತ್ಕಾಲಕ್ಕೆ ಕಹಿಯಾಗಿ ಕಾಣುತ್ತದೆಯಾಗಲಿ ಪರಿಣಾಮದಲ್ಲಿ ಅದು ಅಮೃತದಂತೆ. ಇದು ಅಹಿಂಸೆಯ ಅನಿವಾರ್ಯ ನಿಕಷ. ನನಗೆ ಉಂಟಾದ ಕಹಿ ಅನುಭವದಿಂದ ಇದನ್ನು ಬರೆಯುತ್ತಿದೇನೆ. ಮೀರಾ ಬೇನಳ ಪಕ್ಷ ಹಿಡಿದು ನಾನು ಒತ್ತಿ ಹೇಳಿರಬಹುದು. ಆದರೆ ಅವಳನ್ನು ಗೋಳಾಡಿಸಿದ ಹಾಗೆ ನಾನು ಮತ್ತಾರನ್ನೂ-ಗಂಡಾಗಲಿ, ಹೆಣ್ಣಾಗಲಿ-ಗೋಳಾಡಿಸಿಲ್ಲ. ನನ್ನ ಕಠೋರತೆ, ಅಧೀರತೆ, ಮೋಹಗಳೇ ಅದರ ಕಾರಣ. ಮೀರಾಬೇನ್ ಮಾಡಿದ ತ್ಯಾಗ ಅವರ್ಣನೀಯವಾದುದು. ಅಂತಲೇ ಆಕೆ ಪರಿಪೂರ್ಣಳಾಗಲಿ ಎಂದು ನನ್ನ ಬಯಕೆ. ಈ ಮೋಹಕ್ಕೊಳಗಾಗಿ, ಅಲ್ಪ ಸ್ವಲ್ಪ ತಪ್ಪು ಕಂಡು ಕೋಪದಿಂದೇನಾದರೂ ಹೇಳಿದೆನೋ ಫಲ, ಅಶ್ರುಧಾರೆ. ಈ ಅನುಭವದಿಂದ ನನ್ನಲ್ಲಿರುವ ಹಿಂಸೆಯನ್ನು ಒರೆಗೆ ಹಚ್ಚಲು ಅವಕಾಶ ದೊರೆಯಿತು. ಅದರ ಮೂಲಕ ನನ್ನ ಪೂರ್ವಸ್ಮರಣೆ ಮೂಡಿ, ನನ್ನನ್ನು ನಾನೇ ತಿದ್ದಿಕೊಳ್ಳಲು ಪ್ರಯತ್ನ ಮಾಡಿದೆ. ಅಂತಲೇ ನಿನ್ನ ಕಾಗದ ನನಗೆ ಬಹಳ ಚಲೋ. ನಿನಗೆ ಉತ್ತರ ಕೊಡಲು ನನಗೆ ಬಂದೀತು, ಬಾರದಿದ್ದೀತು; ನನಗೆ ಮಾತ್ರ ಅದರಿಂದ ಲಾಭವಾಗುತ್ತದೆ. ನನ್ನ ಕಠೋರತನದ ಗುರುತು ನನಗೆ ವಿಲಾಯತಿಯಲ್ಲಿ

ಆಯಿತು. ಅಲ್ಲಿ ಮೀರಾನೇ ನನ್ನ ಉಪಚಾರಕ್ಕಿದ್ದವರಲ್ಲಿ ಮುಖ್ಯಳು. ಅಲ್ಲಿ ಕೂಡಾ ಅವಳನ್ನು ನಾನು ಗೋಳಾಡಿಸದೆ ಬಿಡಲಿಲ್ಲ. ಅದರಿಂದ ನಾನು ಪಾಠ ಕಲಿತೆ. ಯಾವ ವಿಷಯದಲ್ಲೇ ಆಗಲಿ, ದೇವರು ನನ್ನ ಮೌಢ್ಯವನ್ನು ಬಹಳ ಕಾಲ ನಿಲ್ಲಗೊಡಲಿಲ್ಲ. ರಾಜಕೀಯದಲ್ಲಿ ಕೂಡ ನಾನು ತಪ್ಪು ಮಾಡಿದ ಕೂಡಲೆ ಒಡನೊಡನೆಯೆ ದೇವರು ಸರಿಯಾದ ದಾರಿಗೆ ತಂದು ಬಿಟ್ಟಿದಾನೆ. ನಿನ್ನ ಕಾಗದವೂ ಅಂಥ ಜಾಗ್ರತಿಗೆ ನೆರವಾಗಿದೆ.

ಇದಕ್ಕೆ ಮೊದಲು ನಾನು ಬರೆದ ಕಾಗದ ನಿನಗೆ ಚಲೋ ಎನಿಸಬಹುದು. ಅಪೂರ್ಣತೆಯಲ್ಲಿ ಪೂರ್ಣತೆ ಬಯಸಿದರೆ ಹೇಗೆ? ಒಬ್ಬ ಕುರುಡ ಕುರಡರ ಗುಂಪು ಕೂಡಿಸಿದ. ಕುರುಡನಿಗೆ ತನ್ನ ಕುರುಡು ಗೊತ್ತು. ಅದಕ್ಕೆ ಮದ್ದೂ ಗೊತ್ತು. ಅವನಿಗೆ ನಂಬಿಗೆಯಿದೆ; ಆ ಕುರುಡರನ್ನೂ ಬಾವಿಗೆ ಕೆಡವುದಿಲ್ಲ, ತಾನೂ ಬೀಳುವುದಿಲ್ಲ. ತನ್ನ ಕೈಯಲ್ಲಿ ಕೋಲು ಹಿಡಿದು ನಡೆದಿದಾನೆ ಅವನು. ಮುಂದಿನ ದಾರಿಯನ್ನು ಕೋಲಿನಿಂದ ತಡವರಿಸಿಕೊಂಡು ಊರಿ ನಡೆಯುತ್ತಾನೆ; ಅದರಂತೆ ಹೆಜ್ಜೆಯಿಡುತ್ತಾನೆ. ಅದರಿಂದ ಎಲ್ಲವೂ ಇಲ್ಲಿಯ ತನಕ ಕುಶಲವಾಗಿಯೆ ನಡೆದಿದೆ. ಕೋಲು ಹಿಡಿದಿದ್ದರೂ ಒಮ್ಮೊಮ್ಮೆ ಹಾದಿ ತಪ್ಪುತ್ತದೆ. ತಪ್ಪಿದಾಗ ತನ್ನ ತಪ್ಪು ತಿಳಿದುಕೊಂಡು ತಾನೂ ಸರಿಯಾದ ಹಾದಿಗೆ ಮರಳಿ ಬಂದು, ತನ್ನ ಸಂಗಡಿಗರನ್ನೂ ಸರಿಯಾದ ಹಾದಿಗೆ ತಿರುಗಿಸಿದ್ದಾನೆ. ನನ್ನ ಕುರುಡತನ ಇನ್ನೂ ಉಳಿದಿದೆ ಎಂದೇ ನಿನ್ನಂಥ ಪ್ರೇಮಿಗಳಿಗೆ ಟೀಕೆ ಮಾಡಲು ಅವಕಾಶ ಸಿಗುತ್ತದೆ. ನನ್ನ ಕುರುಡು ಹೋದರೆ ಟೀಕೆಗೆ ಅವಕಾಶವೂ ಹೋದೀತು. ಅಲ್ಲಿಯ ತನಕ, ಕುರುಡರೆಲ್ಲರೂ ಸತ್ಯಾರ್ಥಿಗಳಾದುದರಿಂದ ಆನೆ ಕಂಡಂತೆ ವರ್ಣಿಸಿಯಾರು. ನಿಮ್ಮೆಲ್ಲರ ವರ್ಣನೆ ಬೇರೆ ಬೇರೆ ಇದ್ದಾವು; ಅವುಗಳಲ್ಲಿ ಸಲ್ಪ ಸತ್ಯಾಂಶವಿಲ್ಲದಿಲ್ಲ. ಕಡೆಗೆ ಎಲ್ಲರೂ ಆನೆಯನ್ನಂತೂ ಮುಟ್ಟೇರಿ. ನಿಮ್ಮ ಕಣ್ಣು ತೆರೆತೆರೆದಂತೆ ಎಲ್ಲರೂ ನಕ್ಕು ಕುಣಿದೇವು; ಇದೇ ನೋಡು ಆನೆ ಎಂದೇವು. ನಾವು ಗೀತೆಯಲ್ಲಿ ಓದಿದ ವಿಷಯವಾಗಿ ಮೊದಲೇ ನಮ್ಮ ಕಣ್ಣು ತೆರೆದಿದ್ದರೆ

ಬಳಿತಾಗುತ್ತಿತ್ತು. ತಡವಾಗಿ ಕಣ್ತೆರೆದವೆಂದು ಚಿಂತೆಯೇಕೆ? ದೇವರಿಗೆ ಕಾಲದ ಲೆಕ್ಕವೇ ಇಲ್ಲ. ಇದ್ದರೆ ಅದು ಬೇರೆ ಲೆಕ್ಕ, ಜ್ಞಾನದಲ್ಲಿ ಅಜ್ಞಾನ ಲಯವಾಗುತ್ತದೆ.

ನಿನಗೆ ನನ್ನಲ್ಲಿ ಕಾಣುವ ಲೋಪಗಳಿಗೆ ಇದರಲ್ಲಿ ಉತ್ತರ ಹುಡುಕಿಕೊಳ್ಳಲು ಆದೀತಲ್ಲವೆ. ಇನ್ನು ಮುಂದೆ ನೀನು ಪ್ರಶ್ನೆ ಕೇಳಬಾರದು ಎಂದು ಇದರ ಅಭಿಪ್ರಾಯವಲ್ಲ. ಕೇಳುತ್ತ ಹೋಗು, ನಾನು ಉತ್ತರ ಕೊಡುತ್ತ ಹೋಗುತ್ತೇನೆ.

ಯರವಡಾ ಮಂದಿರ, ೨೫–೨–೩೨

**ಬಾಪೂನ ಆಶೀರ್ವಾದ.**

೨೩

ನೀನು ಯಜ್ಞ ಮುಗಿಸಲು ಮರೆತೆಯಂತಲೇ ರಾಮ ನಿನ್ನ ಸೊಕ್ಕು ಇಳಿಸಿದನೆಂದು ನನಗನಿಸುತ್ತದೆ. ಈ ತಪ್ಪನ್ನು ನೀನು ತಿಳಿದಷ್ಟು ದೊಡ್ಡದೆಂದು ನಾನು ತಿಳಿದಿಲ್ಲ. ನೀನು ದೊಡ್ಡದು ಎಂದುಕೊಂಡದ್ದೂ ಸರಿಯೇ. ಸೊಕ್ಕು ಇಳಿಯಿತು ಎಂದದ್ದು ಹೀಗೆ: ಲೋಪದ ಪುತ್ಥಳಿಗಳು ನಾವು; ಆದರೂ ಯಾವುದಾದರೊಂದು ತಪ್ಪು ಮಾಡುವವರೆಗೆ ನಾವು ಲೋಪವೇ ಇಲ್ಲದವರೆಂಬ ಸೊಕ್ಕು ಇರುವ ಸಂಭವವಿರುತ್ತದೆ. (ಸೊಕ್ಕು ಬಹಳ ಸೂಕ್ಷ್ಮವಾಗಿರಬಹುದು). ರಾಮಚಂದ್ರನೇ ಶಿವನೋ ಯಾರೋ ನಾರದನ ಗರ್ವಭಂಗ ಮಾಡಿದಂತೆ ರಾಮ ನಿನಗೆ ಮಾಡಿದ ಎನಿಸುತ್ತದೆ. ಎರಡೂ ಕೆಲಸವಾದಂತಾಯಿತು; ಸೊಕ್ಕೂ ಇಳಿಯಿತು, ಇನ್ನು ಮುಂದೆ ತಪ್ಪೂ ಆಗದಂತಾಯಿತು.

ನಿನ್ನ ಕಾಗದದಲ್ಲಿರುವ ಶಬ್ದಚಿತ್ರಗಳ ಬಗ್ಗೆ ಈ ದಿನ ಏನೂ ಬರೆಯುವಂತಿಲ್ಲ. ನೀನು ಕಠೋರಳೆಂದು ನಾನು ಹೇಳುವುದಿಲ್ಲ. ನೀನು ಮಾಡಿದ ಟೀಕೆ ನನಗೆ ಉಪಯುಕ್ತವೇ ಸರಿ. ಗುಣದೋಷ ಎಲ್ಲರಲ್ಲೂ ಇದ್ದೇ ಇದೆ. ನಿನಗೆ ಗುಣ ಕಡಮೆ ಕಾಣುತ್ತಿದ್ದರೆ ಹೆಚ್ಚು ಗುಣದರ್ಶನ ಮಾಡುವ ಅಭ್ಯಾಸ ಮಾಡು.

........ಗೆ ನನ್ನ ಕಾಗದ ನೋಡಿ ವಿಚಾರದಲ್ಲಿ ಬೀಳುವ

ಕಾರಣವಿರಲಿಲ್ಲ.........ಯಜ್ಞಮಾಡುತ್ತಲೇ ಇದಾನೆ. ಬೇರೆ ಶಾರೀರಿಕ ಕೆಲಸಗಳಿಗಾಗಿ ಅವನಿಗೆ ನಾನು ವೇಳೆಯನ್ನು ಉಳಿಸಿಯೇ ಇಲ್ಲ. ಅದಕ್ಕೆ ಅವನೇನು ತಾನೆ ಮಾಡಬಲ್ಲ? ಇದರಲ್ಲಿ ಕೂಡ ನನ್ನ ರಚನಾಶಕ್ತಿಯ ಅಪೂರ್ಣತೆ ಕಾಣುತ್ತಿದೆ. ಆಶ್ರಮ ಪ್ರಾರಂಭ ಮಾಡಿದಾಗಲೇ ಒಳ್ಳೆ ವ್ಯವಸ್ಥೆ ಮಾಡಿದ್ದರೆ ಇಂದು ಬರಿ ಮೇಲ್ವಿಚಾರಣೆಗಾಗಿ ಕೆಲವರು ನಿಂತು ಕಾಲ ಕಳೆಯಬೇಕಾಗಿ ಬರುತ್ತಿರಲಿಲ್ಲ. ನಡೆದದ್ದು ನಡೆದಿದೆ. ಇನ್ನೂ ಅದರಲ್ಲಿ ಬದಲು ಮಾಡಬಹುದು ಅನಿಸುತ್ತದೆ. ಆದರೆ ಹೇಗೆ ಮಾಡಬೇಕೋ ಅವರಿಗೆ ತೋಚದು. ಆಶ್ರಮನಿಯಮಗಳನ್ನನುಸರಿಸಿ ನನಗಿಂತ ಹೆಚ್ಚು ಇಂಥ ವಿಷಯ ವಿಚಾರಮಾಡುವವರು ಯಾರೂ ಇದುವರೆಗೆ ಸಿಕ್ಕಿಲ್ಲ. ಸಿಗುವುದಿಲ್ಲವೆಂದಮೇಲೆ ಇದ್ದುದನ್ನು ಸೈರಿಸಬೇಕು; ಎಷ್ಟೋ ಅಪೂರ್ಣತೆಯಿದೆ ಎನ್ನುವುದನ್ನು ಲಕ್ಷ್ಯದಲ್ಲಿ ಇಡಬೇಕು. ಆಶ್ರಮವಾಸಿಗಳೆಲ್ಲ ಶರೀರಶ್ರಮ ತಮ್ಮ ಪಾಲಿಗೆ ಬಂದಷ್ಟು ಮಾಡಬಲ್ಲರು, ಸುವ್ಯವಸ್ಥೆಯಿಡಲೂ ಆದೀತು. ಇದನ್ನು ಮಾಡಲೂ ಬಂದೀತು. ಈ ನಂಬಿಗೆಯಿಟ್ಟೇ ನಾವು ನಡೆಯೋಣ. ಎಂದಾದರೂ ಕೀಲಿ ಸಿಕ್ಕೀತು.

ಯರವಡಾ ಮಂದಿರ, ೭-೩-೩೨

ಬಾಪೂನ ಆಶೀರ್ವಾದ.

೨೪

ನಿನ್ನ ಕಾಗದ. ಇನ್ನು ನಾನು ಎಡಗೈಯಲ್ಲಿ ಬರೆಯಬೇಕಾಗಿದೆ. ಆದ್ದರಿಂದ ದೊಡ್ಡಕಾಗದ ಬರೆಯಲಾರೆ. ಎಡಗೈ ಬಲಗೈಯ ಹಾಗೆ ನಡೆಯಲಾರದು. ಮಹದೇವನ ಸಹಾಯ ಸಿಕ್ಕೀತು. ಆದರೆ ಜೇಲಿನಲ್ಲಿ ಅದೂ ಒಂದು ಹೊಸ ಪ್ರಯೋಗವೇ ಅನ್ನಬೇಕು. ನೋಡೋಣ, ನನಗೆ ಬರೆಯಲಿಕ್ಕೆ ಎಷ್ಟರತನಕ ಸಾಧ್ಯವೊ! ಕೇವಲ ಪ್ರೇಮಾನ ಕಾಗದ ಬರೆಯಲಿಕ್ಕಾದರೂ ಆದೀತೋ ಇಲ್ಲವೋ ನೋಡೋಣ. ಅಗತ್ಯವಾದುದೇ ಇದ್ದರೆ ಬರೆದೇನು.

ನಿನ್ನ ಕಾಗದದಿಂದ ನನಗೆ ಏನೂ ಕಷ್ಟವಾಗಲಿಲ್ಲ. ನಾವೆಲ್ಲರೂ

ದಿನದಿನವೂ ಬೆಳೆದಾದರೂ ಬೆಳೆಯಬೇಕು, ಇಲ್ಲ ಇಳಿದಾದರೂ ಇರಬೇಕು. ಸ್ಥಿರವಾಗಿರಲಾರೆವು.

ದೋಷದ ಹೊರೆಯನ್ನು ನನ್ನ ಮೇಲೆ ನಾನು ತೆಗೆದುಕೊಳ್ಳುತ್ತೇನೆ; ಇದು ವಿಶೇಷ ನಮ್ರತೆಯೂ ಅಲ್ಲ ಅತಿಶಯವೂ ಅಲ್ಲ. ಇದರಿಂದ ಇತರರ ದೋಷ ಕಳೆದೀತು ಎಂದು ಅರ್ಥವಲ್ಲ. ಕೀರ್ತಿಗೆ ಕೈಯೊಡ್ಡಿದಂತೆ ಮುಖಂಡನಾದವನು ಅಪಕೀರ್ತಿಗೂ ಗುರಿಯಾಗಲೇಬೇಕು.

ಸಂಕರವಿವಾಹ ಕೆಲವು ಮಟ್ಟಿಗೆ, ಒಂದು ಮಿತಿಯೊಳಗೆ, ಅಗತ್ಯವೆಂದು ಒಪ್ಪುತ್ತೇನೆ. ಗಂಡಸಿಗೆ ಸೋಡಚೀಟಿ(ವಿಚ್ಛೇದ)ಯ ಅಧಿಕಾರವಿದ್ದರೆ ಹೆಂಗಸಿಗೂ ಇರಬೇಕು. ಆದರೆ ನನಗೆ ಆ ಪದ್ಧತಿಯೋ ಸಮ್ಮತವಲ್ಲ. ಪ್ರೇಮದ ಬಂಧನ ಅವಿಭಾಜ್ಯವಾಗಿರಬೇಕು.

ಸ್ತ್ರೀಪುರುಷರ ಶಿಕ್ಷಣ ಬೇರೆಬೇರೆಯಾಗಿರಬೇಕಾಗಲಿ, ಒಂದೇ ಕಡೆ ನಡೆಯಬೇಕು. ವಿಷಯದ ಮೇಲೆ ಇದು ಆಧಾರಗೊಂಡಿದೆ. ವಕೀಲಿ ಒಂದೇ ಕಡೆ ಕಲಿಯಬೇಕು. ಈ ವಿಷಯವಾಗಿ ಎಲ್ಲ ಪ್ರದೇಶಕ್ಕೂ ಎಲ್ಲ ಪರಿಸ್ಥಿತಿಗೂ ಸರಿಹೋಗುವಂಥ ನಿಯಮಗಳನ್ನೂ ರಚಿಸಲು ನನಗೆ ಆಗಿಲ್ಲ. ಈ ಕೆಲಸ ಸುಲಭವಲ್ಲ. ಎಲ್ಲೂ ನಿಶ್ಚಯಪೂರ್ವಕವಾದ ಪರಿಣಾಮವನ್ನು ಹೀಗೆ ಎಂದು ಯಾರೂ ತೋರಿಸಿಲ್ಲ. ಈ ಪ್ರಶ್ನೆಯೆಲ್ಲವೂ ಇನ್ನೂ ಪ್ರಯೋಗದಲ್ಲೇ ಇದೆ.

ಚೆಲುವಿನಸ್ತುತಿ ಆಗಲೇಬೇಕು. ಆದರೆ ಮೂಕವಾಗಿ ಆಗಬೇಕು. 'ತೇನತ್ಯಕ್ತೇನ ಭುಂಜೀಥಾಃ' ಮುಗಿಲ ಸೌಂದರ್ಯದಿಂದ ಆನಂದ ಹೊಂದದವರಿಗೆ ಏನೂ ರುಚಿಸುವುದೇ ಇಲ್ಲ ಎನ್ನಬಹುದು. ಆದರೆ ಹರ್ಷೋನ್ನತ್ತರಾಗಿ ನಕ್ಷತ್ರಮಂಡಲಕ್ಕೇ ಸೋಪಾನ ಕಟ್ಟಲು ತೊಡಗುವವರು.

*　　*　　*　　*

........ಚೀನ-ಜಪಾನದ ವಿಷಯದಲ್ಲಿ ನನ್ನ ಸಾನುಭೂತಿ ಚೀನದ ಕಡೆಗೇ ವಾಲೀತು. ಯಾರಿಗೋ ಹುಡುಗರಿಗೆ ಬರೆದ ಕಾಗದಸಲ್ಲಿ ನಿಜಸ್ಥಿತಿ ನಾನು ವರ್ಣಿಸಿದ್ದೇನೆ. ಅದೇ ಇರಬೇಕು.

ಯರವಡಾ ಮಂದಿರ, ೧೩-೩-೩೨

**ಬಾಪೂನ ಆಶೀರ್ವಾದ.**

೨೫

ಎಡಗೈಯಿಂದ ಬರೆಯುವ ವ್ರತತೊಟ್ಟ ಮೇಲೆ ಬರೆಯುವುದು ತನ್ನಷ್ಟಕ್ಕೆ ತಾನೇ ಕಡಮೆಯಾಗುತ್ತದೆ. ಇನ್ನೂ ಬರೆಯುವ ರೂಢಿ ಯಾಗಿಲ್ಲವೆಂದು ಹಾಗೆ. ವಿಲಾಯತಿಯಿಂದ ತಂದ ಕಾಗದ ಮುಂತಾದ ವನ್ನೂ ಬಳಸಬಹುದು. ಅದರಿಂದ ಬುದ್ಧಿಭೇದ ಆಗುವಂತಿದ್ದರೆ ಹಾಗೆಯೆ ಇಡಿರಿ. ಆ ಮೇಲೆ ಬಳಸಲು ಬಂದೀತು.

........ಯಜ್ಞದ ವಿಷಯವಾಗಿ ಅಭಿಮಾನ (ಆಗ್ರಹ) ಅಗತ್ಯ. ನಾನು ಎಂಥವನು, ನನ್ನ ಯಜ್ಞ ತಪ್ಪಬಾರದು ಎಂಬ ಅಭಿಮಾನ (ಗರ್ವ) ತ್ಯಾಜ್ಯ.

ನನಗೆ ಮಾಯಾಬಂಧನವಿಲ್ಲ ಎಂದು ಅಧಿಕಾರಪೂರ್ವಕವಾಗಿ ನಾನು ಹೇಳಬಹುದು. ಹಾಗೆಂದರೆ ಮೇಘಜೀವಿ (ಸಿಡುಬಿನಿಂದ ಸತ್ತ ಒಬ್ಬ ಆಶ್ರಮ ಬಾಲಕ)ಯ ವಿಷಯವಾಗಿ ನಾನು ಉತ್ತರ ಹೇಳ ಬೇಕಾದೀತಲ್ಲವೆ? ಮಾಯೆಯ ಪಾಶದಿಂದ ಬಿಡಿಸಿಕೊಳ್ಳುವ ಪ್ರಯತ್ನ ಮಾಡುತ್ತಿದ್ದರೂ ಕೋಮಲತೆ, ಸೇವಾಭಾವಗಳನ್ನು ನಾವು ಬಿಡ ಬಾರದು. ಯಾರು ಸತ್ತರೇನು ಎಂಬ ವಿಚಾರ ಮಾಯೆಯದಲ್ಲ, ಮೂರ್ಖ ತನದ್ದು. ಎಲ್ಲರೂ ಸಾಯಲೇಬೇಕು ಎಂಬದನ್ನು ಅರಿತ ಮೇಲೆ ವಿಚಾರ ವೇಕೆ? ಎರಡನೆಯದು ಹೀಗೆ: ನಾವು ಸ್ವೇಚ್ಛೆಯಿಂದಲೆ ಸೂತ್ರಧಾರನ ಕೈಗೊಂಬೆಗಳಾದ ಮೇಲೆ ವಾದವಿವಾದ ಏಕೆ? ಅವನಿಗೆ ಹೇಗೆ ಬೇಕೋ ಹಾಗೆ ಕುಣಿಸಿಯಾನು. ಮುಖ್ಯವಾದ ಮಾತು ಕುಣಿಯುವುದೇ ತಾನೆ? ಯಾರಿಗೆ ಸದೋದಿತ ನಾಟ್ಯಕ್ಕೆ ಅವಕಾಶ ಸಿಕ್ಕಿತೋ ಅವನಿಗೆ ಬೇರೇನು ಬೇಕು?

........ನಿನ್ನ ತಪ್ಪಿನ ಚರ್ಚೆ ಮಾಡಬೇಕೆಂದು ನನ್ನನ್ನು ಕೇಳಿ, ನಿನ್ನ ಸ್ತುತಿ ಮಾಡಿಸಿಕೊಳ್ಳಬೇಕೆಂದು ಬೇಡುತಿಯೇನು. ನಿನ್ನ ದೋಷ ತೋರಿಸುವುದು ನನಗೆ ಬೇಕಾಗಿಲ್ಲ. ಎಷ್ಟೋ ಸಲ ನಿನಗೆ ತೋರಿಸಿಲ್ಲವೆ? ಅದರಲ್ಲಿ ಎಷ್ಟು ತಿದ್ದಿಕೊಂಡಿದೀಯೋ ಹೇಳು. ಆ ಮೇಲೆ ಮುಂದಿನ ವಿಚಾರ.

ದೈವಭಕ್ತರಲ್ಲಿ ಎಷ್ಟೋ ಮಟ್ಟಿಗೆ ಸಮತೆ ಇರುತ್ತದೆ. ಪೂರ್ಣ ಸಮತೆ ಯಾರಲ್ಲಾದರೂ ಪ್ರಕಟವಾದರೆ ಅವನೇ ದೇವರು. ಅಂಥವನು ಒಬ್ಬನೇ ಸರಿ. ಆದ್ದರಿಂದ ಪರಿಪೂರ್ಣತಮನಾದ ಮನುಷ್ಯನಲ್ಲಿ ಕೂಡ ಸಮತೆ ಅಪೂರ್ಣವೇ! ಅಂತಲೇ ಮತಭಿನ್ನತೆ, ವಿರೋಧ. ಅದರಿಂದ ನೊಂದುಕೊಳ್ಳುವ ಅಗತ್ಯವಿಲ್ಲ. ಜಗತ್ತು ವಿಷಮತೆಯ ಪರಿಣಾಮ. ದಿನದಿನವೂ ಸಮತೆಯನ್ನು ಸ್ವಲ್ಪ ಸ್ವಲ್ಪ ಸಾಧಿಸುವುದೇ ನಮ್ಮ ಧರ್ಮ ವಾಗಬೇಕು. ಹಾಗೆ ಮಾಡಿದರೆ ವಿಷಮತೆ ಅಸಹ್ಯವಾಗುವದರ ಬದಲು ಕೊಂಚಮಟ್ಟಿಗೆ ಸುಂದರವಾಗಿಯೆ ಕಂಡೀತು.

ಎಲ್ಲ ದೇಶಕ್ಕಿಂತ ಹಿಂದುಸ್ಥಾನದಲ್ಲಿ ಸರ್ವವೂ ಶ್ರೇಷ್ಠವೆಂದೆಣಿಸುವ ಕಾರಣವಿಲ್ಲ. ಏರಿಳಿತಗಳು ವಿಶ್ವದ ನಿಯಮ. ಹಿಂದುಸ್ಥಾನದಲ್ಲಿ ಎಷ್ಟೋ ಒಳಿತಾದುದು ಇದೆಯೆಂದೇ ಅದು ಸೋತಿತು; ಗೆಲ್ಲಲಿಲ್ಲ. ಇದರ ಅರ್ಥ ಹೀಗೆ: ಗುಲಾಮನಿಗಿಂತ ಬಲಾತ್ಕಾರ ಮಾಡುವ ಪುಂಡನ ಸ್ಥಿತಿ ಅಧಮ.

ನಿಮ್ಮಲ್ಲಿ ಭೂಗೋಲಿದ್ದು, Upton Sinclair ನ ಪುಸ್ತಕ ಯಾವು ಇವೆ?

ಯರವಡಾ ಮಂದಿರ, ೨೧-೩-೩೨

**ಬಾಪೂನ ಆಶೀರ್ವಾದ.**

**೨೬**

ನಿನ್ನ ಮನಸಿನಲ್ಲಿ ಬಂದ ಪ್ರಶ್ನೆಯೆಲ್ಲ ಕೇಳು. ಇಂಥ ಸಂದರ್ಭ ಮತ್ತೆ ಬರಲಾರದು. ಒಂದೊಂದು ಸಾಲಿನೊಳಗೂ ನಾನು ನಿನಗೆ ಉತ್ತರ ಕೊಡಬಲ್ಲೆ, ಪುಟಪುಟ ಬರೆಯಲೂ ಬಲ್ಲೆ. ಹೆಚ್ಚಾಗಿ ಬರೆಯತಕ್ಕದ್ದು ಏನೂ ಇರದಿದ್ದರೆ ಸ್ವಲ್ಪದರಲ್ಲೇ ಮುಗಿಸುತ್ತೇನೆ. ಹೇಗೇ ಬರೆದರೂ ಉತ್ತರ ಮಾತ್ರ ಅಪೂರ್ಣವಾಗದು. ನಿನ್ನ ಮಾತಿನ ಪರಿಣಾಮ ನನ್ನ ಬಲಗೈಯ ಮೇಲೆ ಆಯಿತು ಎಂದರೆ ಕಾಕತಾಳೀಯ ನ್ಯಾಯವಿದ್ದಂತೆ.

ನನಗೆ ಕನಸು ಬೀಳುತ್ತವೆ. ಆದರೆ ಅತ್ತ ಕಡೆ ನನಗೆ ಲಕ್ಷ್ಯವಿಲ್ಲ. ಕನಸು ಬಿದ್ದರೂ ಅವಕ್ಕೆ ನಾನು ಬೆಲೆ ಕೊಡುವುದಿಲ್ಲ.

ನಮ್ಮ ಪುಸ್ತಕಾಲಯದಲ್ಲಿ Carlyle, Ruskin ರ ಪುಸ್ತಕಗಳಿವೆ. ಅದರ ಪಟ್ಟಿ ಕೂಡಿ ಕಳಿಸು.

ನಮ್ಮಲ್ಲಿ ಪುಸ್ತಕ ಸಂಗ್ರಹದ ಪಟ್ಟಿ ಎಷ್ಟಿವೆ? ಹೆಚ್ಚು ಪ್ರತಿಯಿದ್ದರೆ ಒಂದು ಪಟ್ಟಿ ನನಗೆ ಕಳಿಸು.

ಇದುವರೆಗೂ ನಾನು ನಿನಗೆ ಪ್ರೌಢಸ್ತ್ರೀಯರ ವಿಷಯ ಬರೆದಿಲ್ಲ. ಈ ಹೊತ್ತು ಬರೆಯಬೇಕು ಎನಿಸಿದೆ. ಆಶ್ರಮದಲ್ಲಿರುವ ಹೆಂಗಸರು ಯಾವ ಸಾಮಾಜಿಕ ಉದ್ದೇಶದಿಂದಲೂ ಅಲ್ಲಿ ಗುಂಪು ಸೇರಿಲ್ಲ. ಆದುದರಿಂದಲೇ ಸಂಘ ಮುರಿದಿದೆ. ಈ ವಿಷಯವಾಗಿ . . .ರಿಗೆ, . . . .ಳಿಗೆ ಬರೆದಿದೇನೆ. ಅದರಿಂದ ಪರಿಣಾಮವೇನೂ ಆದಂತಿಲ್ಲ. ಜವಾಬದಾರಿ ವಹಿಸಿ, ನಾಲ್ಕು ಜನ ಸೇರಿ ಕೆಲಸ ಮಾಡುವ ಸಾಮರ್ಥ್ಯ ನಮ್ಮ ಹೆಂಗಸರಿಗೆ ಬರಬೇಕು. ನಿನಗೆ ಧೈರ್ಯ, ಆತ್ಮವಿಶ್ವಾಸ ಇದ್ದರೆ ನೀನು ಈ ಕೆಲಸ ವಹಿಸಿಕೋ. ಕೈ ಹಾಕಿದ ಮೇಲೆ ಹಿಂದೆಗೆಯುವುದಿಲ್ಲ ಎಂಬ ನಿರ್ಧಾರದಿಂದ ವಹಿಸಿಕೋ. ಸರ್ವಾನುಕೂಲವೂ ಇದ್ದರೆಯೆ ಕೆಲಸ ಮಾಡುತ್ತೇನೆ ಎನ್ನುವ ಹಾಗಿಲ್ಲ. ಎಂಥ ಕಟ್ಟಿಗೆ ಸಿಕ್ಕರೂ ದಾರುಶಿಲ್ಪಿ ಅಂದವಾದ ಸಾಮಾನು ಮಾಡುತ್ತಾನೆ; ಎಂಥ ಕಲ್ಲೇ ಇರಲಿ, ಶಿಲಾಶಿಲ್ಪಿ ಸುಂದರ ಮೂರ್ತಿಯನ್ನು ನಿರ್ಮಿಸುತ್ತಾನೆ; ಹಾಗೆಯೆ ಎಂಥ ಜನರ ಸಹವಾಸವೇ ಸಿಕ್ಕರೂ ಅವರ ಜೊತೆಯಲ್ಲಿದ್ದು ಅವರಿಂದ ಕೆಲಸ ಮಾಡಿಸುವ ಯೋಗ್ಯತೆಯಿದ್ದರೇನೇ ಮನುಷ್ಯ! ಈ ಪ್ರಪಂಚದಲ್ಲಿ ನಾವು ಕಲಿಯಬೇಕಾದದ್ದು ಇದೇ. ನಮಗೆ ಸಮುದ್ರದ ಔದಾರ್ಯಬೇಕು. ಯಾರನ್ನಾದರೂ ಕಂಡ ಕೂಡಲೆ ಅವನ ದೋಷವನ್ನು ಹುಡುಕಲು ಪ್ರಾರಂಭಿಸಿದರೆ ಕೆಲಸ ಕೆಟ್ಟೇ ತೀರಬೇಕು ತಾನೆ. ದೋಷ ನಮ್ಮಲ್ಲಿಯೂ ಇದೆ; ಇದುರಿನ ಜನರಲ್ಲೂ ಇದೆ. ಆದರೂ ಅವರ ಜೊತೆಯಲ್ಲಿ ಕೂಡಿ ಬಾಳಬೇಕೆಂಬ ನಿಶ್ಚಯವಿದ್ದರೇನೇ ಕೆಲಸವಾದೀತು. ಇದು ಬಹಳ ಕಷ್ಟವಾದ ಕೆಲಸ; ನಾನು ಬಲ್ಲೆ. ಅನೇಕ ವರ್ಷದಿಂದ ನನಗಂತೂ ಅದೇ ಕಸಬಾಗಿದೆ. ಅದರಲ್ಲಿ ನಾನು ಸಫಲನಾದೆ ಎಂದು ಹೇಳಲಾರೆ. ಕೊಂಚ ಸಫಲತೆ

ಸಿಕ್ಕಿದೆ ಎನಿಸುತ್ತದೆ. ಅಂತಲೇ ಇತರರನ್ನೂ ಜೊತೆಗೆ ಕರೆದುಕೊಂಡು ಹೋಗುವ ಧೈರ್ಯ ಮಾಡುತ್ತೇನೆ.

ನಿನಗೆ ಯೋಗ್ಯ ಕಂಡದ್ದನ್ನು ಮಾಡು. ಉಳಿದ ಅಕ್ಕತಂಗಿಯರಿಗೆ ಈ ಕಾಗದ ಬೇಕಾದರೆ ತೋರಿಸು.

ಯರವಡಾ ಮಂದಿರ, ೨೮–೩–೩೨

ಬಾಪೂನ ಆಶೀರ್ವಾದ.

**೨೭**

ನಿನ್ನ ಕಾಗದ ದೊರಕಿತು. ಆಶ್ರಮದಲ್ಲಿ ಕತ್ತಿ, ಕಠಾರಿಗಳ ಪ್ರಯೋಗ ನಾವೇಕೆ ಮಾಡಬೇಕು. ....ರು ತಮ್ಮ ಪತ್ರದಲ್ಲಿ ಈ ವಿಷಯ ಚರ್ಚಿಸಿದಾರೆ. ಇಲ್ಲಿ ನಾನು ಆ ವಿಷಯ ಬರೆಯುವುದಿಲ್ಲ. ನೀನೂ ಅವನ್ನು ಕಲಿಯಲು ಮೊದಲು ಮಾಡಿದ್ದೀಯಂತೆ. ನಿನಗೆ ಇಂಥ ಪ್ರಶ್ನೆ ಹೊಳೆದಿರಬೇಕೆಂದು ತಿಳಿದು ಇದನ್ನು ಬರೆದೆ.

ನೀನು ಆಶ್ರಮಕ್ಕೆ ಪ್ರಮಾಣಪತ್ರ ಬರೆದು ಕೊಡುತ್ತಿದ್ದೀಯೆ. ನಾನು ಹಾಗೆ ಮಾಡಲಿಲ್ಲ. ನಿಜವಾಗಿದ್ದರೆ ಮಾತ್ರ ಈ ಪ್ರಮಾಣಪತ್ರ ನನಗೆ ಒಪ್ಪಿಗೆ. ಯಾವುದನ್ನು ಹಿಡಿದರೂ ಅದರ ಹುಚ್ಚೇ ಹಿಡಿಯುತ್ತದೆ ಆಶ್ರಮಕ್ಕೆ; ಹೀಗೆ ನಿನಗೆ ಎನಿಸಿದಂತೆ ಕಾಣುತ್ತದೆ. ಅದು ಸರಿಯಲ್ಲ. ಆಶ್ರಮದ ವ್ರತಗಳನ್ನೇ ನಾವೆಲ್ಲಿ ಪೂರ್ಣವಾಗಿ ಆಚರಣೆಗೆ ತಂದಿದೇವೆ? ಆಶ್ರಮದಲ್ಲಿ ಹಿಂದೀ, ಉರ್ದು, ಸಂಸ್ಕೃತ, ತೆಲುಗು, ತಮಿಳು ಎಲ್ಲವನ್ನೂ ಕಲಿಸಬೇಕಾಗಿತ್ತು. ಈ ಬಗ್ಗೆ ಮಾಡಿದ ಪ್ರಯತ್ನ ತೀರಾ ಕಡಮೆ. ಚರ್ಮದ ಕಲೆಯನ್ನು ಎಲ್ಲಿ ಕಲಿತಿದೇವೆ? ಒಳ್ಳೆ ನಯವಾದ ನೂಲನ್ನೆಲ್ಲಿ ತೆಗೆಯುತ್ತಿದೇವೆ? ಇಂಥ ಮಾತು ಎಷ್ಟೋ ನಾನು ತೋರಿಸಬಲ್ಲೆ. ನನ್ನ ಮಾತು ಸಮರ್ಥಿಸಲು ಇಷ್ಟು ಸಾಕು. ಎಲ್ಲರೂ ಲಾಠಿಯ ಹಿಂದೆಯೆ ಹೋಗುತ್ತಾರೆ ಎಂದರೆ ಎಲ್ಲರೂ ಮಿಠಾಯಿ ಸುತ್ತ ಸೇರುತ್ತಾರೆ ಅಂದ ಹಾಗೆ. ಏನೂ ಪರಿಶ್ರಮವಿಲ್ಲದೆ, ನಿರಾಯಾಸವಾಗಿ ಅನುಸರಿಸಬಹುದಾದ ಮಾತು ಜಗತ್ತಿನಲ್ಲಿ ಇನ್ನೂ ಎಷ್ಟೋ ಇವೆ. ನಾವು ಇನ್ನೂ ಪಶುಸಂತಾನವೇ; ಅಂತಲೇ ನಮಗೀ ಗುಣ ಸ್ವಾಭಾವಿಕ.

ಈ ಗುಣವನ್ನೂ ಕಷ್ಟಪಟ್ಟು ಗಳಿಸಬೇಕಾಗಿಲ್ಲ. ಆದರೆ ಪ್ರಶ್ನೆ, ಗಳಿಸಲು ಯೋಗ್ಯವೋ ಅಲ್ಲವೋ ಎನ್ನುವುದು. ಪಶುಜಾತಿಯ ಗುಣಗಳೆಲ್ಲವೂ ತ್ಯಾಜ್ಯವಲ್ಲ!

ಸದ್ಯ, ಭೋಜನಾಲಯದಲ್ಲಿ ಎಷ್ಟು ಜನ ಊಟಮಾಡುತ್ತಾರೆ? ನಾನ್ ರೊಟ್ಟಿ (ಬ್ರೆಡ್) ಇನ್ನೂ ಮಾಡುತ್ತಾರೆಯೇ? ಯಾರು ಮಾಡುತ್ತಾರೆ? ಚೆನ್ನಾಗಿದ್ದರೆ ಯಾರಾದರೂ ಬರುವವರ ಸಂಗಡ ಒಂದೆರಡು ಕಳಿಸು.

ದೀಕ್ಷಿತರು ಬರೆದ ಜ್ಯೋತಿಷಗ್ರಂಥ ಗುಜರಾತಿಯಲ್ಲಿ ಭಾಷಾಂತರವಾಗಿದೆ. ನನ್ನಲ್ಲಿದೆ. ಬಾಲ್‌ನದು ಇಲ್ಲಿ ಸಿಕ್ಕೀತು. ಅದೇನು ನನಗೆ ಬೇಡ. Upton Sinclair ಕಳಿಸಿದ ಪುಸ್ತಕಗಳು ಆಶ್ರಮದಲ್ಲಿವೆ. ಅವನ್ನೂ ಪುಸ್ತಕದಲ್ಲಿ ಬರೆದು ಪಟ್ಟಿಗೆ ಸೇರಿಸಿ, ಅವುಗಳಲ್ಲಿ Boston–Brass Tacks, ಎರಡನ್ನೂ ಕಳಿಸು. ಉಳಿದ ಪುಸ್ತಕಗಳ ಪಟ್ಟಿ ಕಳಿಸು.

ಉಪನಿಷತ್ತುಗಳು ನನಗೆ ಬಹಳ ಸೇರುತ್ತವೆ. ಆದರೆ ಅವುಗಳ ಅರ್ಥ ಬರೆಯುವ ಯೋಗ್ಯತೆ ನನಗಿದೆ ಎನಿಸುವುದಿಲ್ಲ. ನನ್ನ ಹಾಸ್ಯ ಪ್ರವೃತ್ತಿಯನ್ನು ನೀನು ಗುರುತಿಸಿದೆ. ದೋಷ ತೋರಿಸು ಎಂದು ಕೇಳಿ ಹೊಗಳಿಸಿಕೊಳ್ಳುವ ಉಪಾಯ ಮಾಡಿದ್ದೀ, ಎಂದು ವಿನೋದವಾಗಿಯೆ ಹೇಳಬೇಕು. ನಮಗೆ ಬೇಕಾದವರನ್ನು ನಮ್ಮ ದೋಷ ತೋರಿಸಿರೆಂದು ಕೇಳಿದರೆ ಅದರ ಫಲವೇನು? ಸ್ತೋತ್ರವೇ ಅಲ್ಲವೆ. ಏಕೆಂದರೆ, ಪ್ರೀತಿ ದೋಷದ ಮೇಲೆ ಮುಸುಕು ಹಾಕುತ್ತದೆ; ದೋಷಕ್ಕೇ ಗುಣದ ಬಣ್ಣ ಕೊಡುತ್ತದೆ. ಇದೀ ಚಿತ್ರಕೊಡುತ್ತ ನಿನ್ನನ್ನು Hysterical ಎಂದು ....ರಿಗೆ ಹೇಳಿದ್ದೆ. ಹಾಗೆಂದದ್ದು ಕೂಡ ನಿನ್ನ ಸ್ತುತಿಯೇ ಎಂಬದನ್ನು ....ರು ನಿನಗೆ ಹೇಳಲಿಲ್ಲವೆ? ನೀನು Hysterical ಆಗಿರದಿದ್ದರೆ ನೀನು ಹೆಚ್ಚು ದೋಷಿ ಎನ್ನಬೇಕಾದ ಸಂದರ್ಭ ಅದು. ನೀನು Hysterical ಇರುವುದು ನಿಜ. ನೀನು ಹುಚ್ಚಳಂತೆ ಮಾಡುವುದರ ಅರ್ಥ ಬೇರೇನು? ಭಾವನಾಪ್ರಾಧಾನ್ಯ ಹೆಚ್ಚಾದರೆ ಅಂಥವನನ್ನೂ Hysterical ಎನ್ನುತ್ತಾರೆ, ಹೌದೇ?

ರಷ್ಯಾವನ್ನು ಜಪಾನು ಗೆಲ್ಲಬೇಕಾಗಿತ್ತು. ಆದರೆ ಇದರಿಂದ ಜಪಾನಿನ ನೀತಿ ನಮಗೆ ಅನುಕರಣ ಯೋಗ್ಯವಾದುದು ಎನ್ನಲಿಕ್ಕೆ ಬಾರದು. ಸದ್ಯ, ನಾವು ನಮ್ಮ ನೀತಿ ಕಾಯ್ದುಕೊಂಡರೆ ಸಾಕು. ಜಪಾನಿನ ನೀತಿಯನ್ನು ಕಾಯಲಿಕ್ಕೆ, ಕೋಟಿ ಕಣ್ಣುಳ್ಳ ಸದೋದಿತ ಜಾಗೃತನಾದ ಪುರುಷ ಬೇರೆ ಇದಾನೆ.

೩–೪–೩೨

**ಬಾಪೂನ ಆಶೀರ್ವಾದ.**

**೨೮**

ಒಂದು ಕಲ್ಲಿನಿಂದ ಹತ್ತು ಹಕ್ಕಿ ಹಾರಿಸುವುದಕ್ಕಿಂತ ಒಂದೇಟಿನಿಂದ ನೂರು ಬೋರೆ ಹಣ್ಣು ಉದುರಿಸುವುದು ಒಳಿತು. ನಿನಗಂತೂ ಹಕ್ಕಿ ಹಾರಿಸುವ ಆಸೆ ಆಗಬಾರದು; ಬಿಡಬೇಕು.

ಅಕ್ಕತಂಗಿಯರಿಗಾಗಿ ನೀನೇನು ತೊಂದರೆಪಡಬೇಕಾಗಿಲ್ಲ. ನಿನ್ನಿಂದ ಆ ಸೇವೆ ಮಾಡಿಸಿಕೊಳ್ಳುವ ಇಷ್ಟ ಅವರಿಗಿದ್ದರೆ, ನಿನಗೆ ಆತ್ಮವಿಶ್ವಾಸವಿದ್ದರೆ ಅದು ತಾನೇ ಸಿದ್ಧಿಸುತ್ತದೆ. ಇಲ್ಲದಿದ್ದರೆ ಈ ವಿಷಯ ನಮ್ಮಿದುರಿಗೇ ಬರಲಿಲ್ಲ ಎಂನು ಮರೆಯಬೇಕು. ಅವರಿಗೆ ನೀನು ಕಲಿಸಬಲ್ಲೆ ಎಂಬುದರಲ್ಲಿ ಅಲ್ಲ ಆತ್ಮವಿಶ್ವಾಸ; ನಮಗೆ ವಿನಯವಿದೆ ಎಂಬ ಆತ್ಮವಿಶ್ವಾಸ. ಯಾರಿಗೂ ತಪ್ಪುತಿಳುವಳಿಕೆಗೆ ಅವಕಾಶ ಕೊಡುವುದಿಲ್ಲ, ಎಂಥ ಕಷ್ಟಬಂದರೂ ಇದಿರಿಸುತ್ತೇವೆ, ಎಂಬ ಆತ್ಮವಿಶ್ವಾಸ. ಅನೇಕಸಲ ಮಾನಭಂಗವಾದೀತಲ್ಲ ಎಂದೋ ತಪ್ಪು ತಿಳಿದಾರು ಎಂದೋ ಜವಾಬದಾರಿ ತೆಗೆದುಕೊಳ್ಳಲು ಹಿಂಜರಿಯುತ್ತೇವೆ. ಈ ಸಂಕೋಚವನ್ನು ದಾಟಬಲ್ಲೆಯಾದರೆ ಜವಾಬದಾರಿ ತೆಗೆದುಕೊಳ್ಳಬೇಕು. ಅಕ್ಕತಂಗಿಯರೆಲ್ಲ ಒಳ್ಳೆಯವರೆಂದು ನೀನು ತಿಳಿದಿದ್ದೀ. ಅವರ ವಿಷಯ ಬರೆಯಬಲ್ಲ, ಅವರ ಕಾರ್ಯಾಲಯ ನಡಸಬಲ್ಲ ಸಹಾಯುಗಾತಿ ಯಾರಾದರೂ ಬೇಕು. ಕಲಿತ ಹುಡುಗಿಯರಿಗಿಂತ ಕಲಿಯದ ಹೆಂಗಸರಲ್ಲಿ ಹೆಚ್ಚು ತಿಳುವಳಿಕೆ, ವ್ಯವಹಾರ ಬುದ್ಧಿ ಇರಬಹುದು. ಆದರೆ ನಿರಕ್ಷರತೆಯ ಮೂಲಕ ಅವರು ಇದನ್ನು ಉಪಯೋಗ ಮಾಡಿಕೊಳ್ಳಲಾರರು. ಕಲಿತ ಹುಡುಗಿಯರಿಂದ

ಈ ಕೊರತೆ ದೂರಾಗಬಹುದು. ನೀನು ಆ ಕೆಲಸ ಮಾಡಬೇಕೆಂದು ನನ್ನ ಅಪೇಕ್ಷೆ.

ಏನಾದರೂ ಒಂದು ನೆವದಿಂದ . . . .ಬಾಯಿ ಎಲ್ಲ ಹೆಂಗಸರನ್ನೂ ಗುಂಪು ಕೂಡಿಸುತ್ತಾರೆ. ಆಕೆ ಏನೋ ಒಂದು ಉದ್ದೇಶದ ಬೀಜ ಬಿತ್ತಿದ್ದರು. ಅದು ಈಗ ಗಿಡವಾಗಿ ಬೆಳೆದಿರಬೇಕು. ಸಾಮಾಜಿಕ ಕೆಲಸ ಗಳನ್ನೇನೋ ಅಲ್ಲಿನ ಭಗಿನಿಯರು ಮಾಡುತ್ತಾರೆ. ಆದರೆ ಅದು ವೈಯಕ್ತಿಕ. ಸಾಮಾಜಿಕ ಸೇವೆಗಾಗಿ ಹೆಂಗಸರು ಸಂಘರೂಪವಾದ ಒಂದು ಜವಾಬದಾರಿ ಹೊರಬೇಕೆಂದು ನನಗೆ ಆಸೆಯಿದೆ. ಇದರಿಂದ ಅವರಲ್ಲಿ ಸಂಘಶಕ್ತಿ ಮೊಳೆತೀತು. ಈ ಶಕ್ತಿ ಮೊಳೆಯಿತೆಂದರೆ ವ್ಯಕ್ತಿ ಬಂದಾರು ಹೋದಾರು, ಸಂಘವೇನೋ ಉಳಿದೀತು. ದೇವರು ಮನುಷ್ಯ ನಿಗೆ ಮಾತ್ರವೇ ಈ ಶಕ್ತಿಯನ್ನು ಕೊಟ್ಟಿದಾನೆ. ನಮ್ಮ ದೇಶದಲ್ಲಿ ಹೆಂಗಸರು ಈ ಶಕ್ತಿಯನ್ನೂ ಗಳಿಸಿಲ್ಲ. ಈ ತಪ್ಪು ಗಂಡಸರದು. ಇರಲಿ. ಈಹೊತ್ತು ನಾವೀ ಗೊಂದಲದಲ್ಲಿ ಬೀಳಬೇಕಾಗಿಲ್ಲ. ಈ ಶಕ್ತಿ ಹೆಂಗಸ ರಲ್ಲಿ ಬರಬೇಕು ಎಂದು ನಮಗೆ ಅನಿಸಿದರೆ ಅದನ್ನು ಗಳಿಸುವ ಪ್ರಯತ್ನ ನಡೆಯಬೇಕು. ಸದ್ಯ ನನ್ನ, ಸಂಘದ ಪತ್ರವ್ಯವಹಾರದ ಮಟ್ಟಿಗಾದರೂ ಆರಂಭವಾಗಲಿ. ನಿಧಾನವಾಗಿ ಅದರಲ್ಲಿ ಕಳೆತುಂಬೋಣ. ನಾನು ಹೇಳಿ ದುದು ನಿನಗೆ ತಿಳಿದಿದ್ದರೆ, ನಿನಗದು ಪೂರ್ಣ ಅರ್ಥವಾಗಿದ್ದರೆ, ಉಳಿದ ಸೋದರಿಯರಿಗೂ ಅದು ಇಷ್ಟವಾಗಿದ್ದ ಪಕ್ಷದಲ್ಲಿ ಈ ವಿಷಯವನ್ನು ಕೈಯಲ್ಲಿ ತೆಗೆದುಕೊಳ್ಳಬೇಕು. ಇದನ್ನು ಪ್ರಾರಂಭ ಮಾಡಲು ನಿಮಗೆ ಏನಾದರೂ ತೊಂದರೆಯಿದ್ದರೆ, ಇದರಲ್ಲೇನು ತಥ್ಯವಿಲ್ಲ ಎಂದು ನಿಮಗನಿ ಸಿದರೆ, ಕೈಬಿಟ್ಟುಬಿಡಿರಿ.

ಧರ್ಮದಿಂದ ಧರ್ಮಕ್ಕೆ ಜನರನ್ನು ಸೇರಿಸಿಕೊಳ್ಳುವುದು ನನಗೆ ಸ್ವಲ್ಪವೂ ಸೇರುವುದಿಲ್ಲ. ಬೇರೆ ಬೇರೆ ಧರ್ಮದ ಸ್ತ್ರೀಪುರುಷರು ಮದುವೆ ಯಾಗುವುದು ಅಸಂಭವ, ಅಥವಾ ಅಯೋಗ್ಯ ಎಂದು ನನಗನಿಸಿಲ್ಲ.

ಹಿಂದೂ ಧರ್ಮದ ಬೇರೆ ಬೇರೆ ಎರಡು ಮೂಲತತ್ವ; ಗೋರಕ್ಷಣೆ, ವರ್ಣಾಶ್ರಮ.

ಯಾವ ರಾಷ್ಟ್ರವೇ ಆಗಲಿ, ಏಳಿಗೆ ಹೊಂದಬೇಕಾದರೆ ಅಹಿಂಸೆ, ಸತ್ಯಗಳ ಹಾದಿಯನ್ನು ತುಳಿಯಲೇ ಬೇಕು.

ವಿದ್ಯಾಪೀಠದಿಂದ ಪ್ರಸಿದ್ಧವಾದ ಗುಜರಾತೀ ಶುದ್ಧಲೇಖನ ಕೋಶದ ಎರಡನೆ ಆವೃತ್ತಿಯ ಪ್ರತಿ-ನನ್ನದು-ಅಲ್ಲಿರಬೇಕು, ಕಳಿಸಿ ಕೊಡು.

ಯರವಡಾ ಮಂದಿರ, ೮-೪-೩೨

**ಬಾಪೂನ ಆಶೀರ್ವಾದ.**

## ೨೯

ನೀನು ನಿಜವಾಗಿಯೂ ಬರೆಯುವಂಥ ಸ್ಥಿತಿಯಲ್ಲಿರಲಿಲ್ಲ. ಕಾಗದ ವೇನೋ ಎಂದಿನಷ್ಟೆ ದೊಡ್ಡದಾಗಿದೆ. ಆದರೆ ಬರವಣಿಗೆಯಲ್ಲಿ ಅಂದ ಚೆಂದವಿಲ್ಲ. ಹಸಿವಿಲ್ಲದಿದ್ದರೆ ತಿನ್ನಬಾರದು. ಮನಸಿಲ್ಲದಿದ್ದರೆ ತಿರುಗಾಡ ಬಾರದು. ಹಾಗೆಯೆ, ಬರೆಯುವ ಹುರುಪಿಲ್ಲದಾಗ ಬರೆಯಬಾರದು. ಅಥವಾ ಬಹಳ ಬಳಲಿದ್ದೇನೆ ಎಂದು ಅಷ್ಟೆ ಬರೆದು ಮುಗಿಸಬೇಕು.

ದಿನದ ಕೆಲಸ ಮುಗಿದ ಮೇಲೆ ಮನಸಿಗೆ ಆನಂದವಿರುವ ಬದಲು ಬೇಸರ, ಸಿಡುಕು ಇರುವುದು ಒಳ್ಳೆಯ ಲಕ್ಷಣವಲ್ಲ. ಇದು ಅನಾಸಕ್ತಿ ಅಲ್ಲವೇ ಅಲ್ಲ. ನಿನ್ನ ಜಂಜಾಟ, ವ್ಯಾಪಕತನ ಸ್ವಲ್ಪ ಕಡಮೆ ಮಾಡು; ಅದೇ ನನ್ನ ಸಲಹೆ, ಆಗ್ರಹ. ಅದರಿಂದ ನಿನಗೂ ನಷ್ಟವಿಲ್ಲ, ಆಶ್ರಮಕ್ಕೂ ನಷ್ಟವಿಲ್ಲ. ಪ್ರಫುಲ್ಲಾಂತಃಕರಣದಿಂದ ಮಾಡಿದ ಕೆಲಸಕ್ಕೆ ವೃದ್ಧಿಯುಂಟು.

ಲೇಜೀಮ್ ಬಗ್ಗೆ ನೀನು ಬರೆದದ್ದು, ವಿಚಾರಮಾಡದೆ ಬರೆದದ್ದು ಎನಿಸುತ್ತದೆ. ಕಲೆಗಾಗಿ ಕಲೆ-ಯೆಂಬುದು ಮನುಷ್ಯನನ್ನು ಎಲ್ಲಿಗೆ ಎಳೆದೀತೋ ನೀನರಿಯೆ. ಅದರ ಹೆಸರಿಗೆ ಸೋತು ವಿಲಾಯತಿಯ ತರುಣರು ಈಗ ನರಕಕ್ಕೇ ಇಳಿಯುತ್ತಿದಾರೆ. ಕಲೆಯ ಲಕ್ಷಣವನ್ನು ವರ್ಣಿಸಬೇಕಾದರೆ ಅದು ನಿನ್ನ ಗಮನಕ್ಕೆ ಬಂದಿಲ್ಲವೆಂದು ಕಾಣಿಸುತ್ತದೆ. ಇನ್ನು ಮೇಲೆ ಅಂದಚೆಂದದ ಕಡೆ ನೋಡದೆಯೆ ನೀನು ಕಾಗದ ಬರೆಯುವು ದಾಗಿ ಮೊದಲೇ ತಿಳಿಸಿದ್ದೆ. ಈಗ ಅದರ ವಿಷಯ ನಾನು ಹೆಚ್ಚೇನೂ ಬರೆಯುವುದಿಲ್ಲ.

ನೀನು Hysterical ಆಗಿ ನನಗೆ ಕಾಣಿಸಲಿಕ್ಕಿಲ್ಲ. ಆಕೆಗೂ ಅದು ಗೊತ್ತಾಗಿರಲಿಕ್ಕಿಲ್ಲ. Hysterical ಎಂಬುದರ ಅರ್ಥವನ್ನೂ ನೀವು ಗಮನಿಸದಿರಬಹುದು. ಅದರ ಅರ್ಥವೇನು ಎಂದು ತಿಳಿದುಕೊಳ್ಳಲು ನೀನು ಶಬ್ದಕೋಶವನ್ನು ಯಾವಾಗಲೂ ಮುಟ್ಟಿರಲಿಕ್ಕಿಲ್ಲ. ಎಂ. ಎ. ಆದವರಿಗೆಲ್ಲ ಇಂಗ್ಲೀಷು ಬರುತ್ತದೆ ಎಂದಲ್ಲ. ಅದರಲ್ಲೂ ಇಂಥ ವಿಶಿಷ್ಟ ಶಬ್ದಗಳ ಅರ್ಥ ಜನರಿಗೆ ತಿಳಿದಿರುವುದು ಬಹಳ ಕಡಮೆ. Hysterical ಗೆ ನೀನು ಒಳ್ಳೆ ಉದಾಹರಣೆ. ಅದು ದೋಷವೇನಲ್ಲ. ಆದರೆ ಕೊನೆಗೆ Hysteria ಹೋಗಲಾಡಿಸುವುದು ಅಗತ್ಯ. ಆದರೆ ಈ ವಿಷಯದ ವಿವೇಚನೆಯಲ್ಲಿ ನಿನ್ನನ್ನೂ ಎಳೆಯುವ ಮನಸಿಲ್ಲ. Hysterical ಅಲ್ಲ ಎಂದು ನೀನು ತಿಳಿದುಕೊಂಡರೆ ಅಡ್ಡಿಯಿಲ್ಲ. ನೀನು ಸತ್ಯಪಥದಲ್ಲಿ ನಡೆಯಬೇಕೆನ್ನುತ್ತೀಯೆ; ಅದರಿಂದ ನನಗೆ ಯಾವ ಚಿಂತೆಯೂ ಇಲ್ಲ. 'ನ ಹಿ ಕಲ್ಯಾಣಕೃತ್ ಕಶ್ಚಿತ್ ದುರ್ಗತಿಂ ತಾತ ಗಚ್ಛತಿ.'

"ಯಾವುದನ್ನಾದರೂ ಹಿಡಿದರಾಯಿತು ಅದನ್ನು ಬಿಡುವ ಹಾಗೇ ಇಲ್ಲ ಆಶ್ರಮದಲ್ಲಿ." ಹೀಗೊಂದು ವಾಕ್ಯ ನಿನ್ನ ಕಾಗದದಲ್ಲಿದೆ. ಅದಕ್ಕೆ ನಾನೇ ಉದಾಹರಣೆ. ಅಷ್ಟು ಯೋಗ್ಯತೆ ನಮಗಿಲ್ಲದಿರಬಹುದು; ಆದರೆ ಯೋಗ್ಯರಾಗುವಂತೆ ದೃಢಪ್ರಯತ್ನ ಮಾಡೋಣ. ನಮಗೆ ಮಾಡಲು ಬಾರದಿದ್ದದ್ದಕ್ಕಾಗಿ ನನಗೆ ದುಃಖವಿಲ್ಲ. ನನಗೆ ಅದರ ತಿಳುವಳಿಕೆಯಿದೆ ಎಂದು ನಾನು ಎಚ್ಚರವಾಗಿದ್ದೇನೆ. ಇಷ್ಟಪಟ್ಟದ್ದನ್ನು ಕಲಿಯಲು ನನಗೆ ವೇಳೆಯಿಲ್ಲ. ನಿಜವಾಗಿ ಇದು ನನ್ನ ಲೋಪ. ನನಗೆ ಶಿಕ್ಷಕ ಶಕ್ತಿಯೂ ಕಡಮೆ, ಕ್ರಮವ್ಯವಸ್ಥೆಯೂ ಕಡಮೆ; ಕಾಲಪ್ರಮಾಣದ ಜ್ಞಾನವೂ ಕಡಮೆ. ಹೀಗಿದ್ದರೂ ನಾನು ಹೊರಗಿರದೆ ಇದ್ದಿದ್ದರೆ (ಸೆರೆಯಲ್ಲಿದ್ದರೆ) ಎಷ್ಟೋ ಕೆಲಸ ಮುಗಿಸುತ್ತಿದ್ದೆ. ನನ್ನ ಅನುಭವ ಹಾಗಿದೆ. ಕಳೆದು ಹೋದ ಮಾತನ್ನು ಯೋಚಿಸಲು ಇಷ್ಟೆ ಕಾರಣ; ಇನ್ನೂ ತಿದ್ದಿಕೊಳ್ಳಲು ಅವಕಾಶವುಂಟೇ ಎಂಬದಕ್ಕೆ. ನಾನು ಮಾಡಲಾರದೆ ಹೋದುದನ್ನು ನೀವೆಲ್ಲರೂ ಸೇರಿ ವಿಚಾರ ಮಾಡಿ ನಿರ್ಧರಿಸಿ, ಸಾಧ್ಯವಾದರೆ ಮಾಡಿರಿ. ಏನೇನು ಮಾಡಬೇಕಾಗಿತ್ತು? ಏನೇನು ಮಾಡಲಿಲ್ಲ? ಅದರಲ್ಲಿ ಏನು

ಮಾಡಬಹುದು? ತೆರವು ಮಾಡಿಕೊಂಡು ಆಲೋಚಿಸಿರಿ. ಸಾಧ್ಯವಾದಷ್ಟು ಮಾಡಿರಿ. ಆಗುವುದಿಲ್ಲ ಎನಿಸಿದರೆ ಅಪರಿಹಾರ್ಯ ಎಂದು ಅದನ್ನು ಮರೆತು ಬಿಡಿ. ಅದಕ್ಕಾಗಿ ಚಿಂತಿಸುತ್ತ ಕೂಡಬೇಕಾಗಿಲ್ಲ.

ಶೂನ್ಯದಂತೆ ಆಗುವುದು ಎಂದರೆ ನಾನು ಮಾಡುತ್ತೇನೆ ಎಂಬ ಭಾವವನ್ನು ಬಿಡುವುದು. ಇದರಲ್ಲಿ ನಿರಾಶಾವಾದಕ್ಕೆ ಸ್ಥಾನವೇ ಇಲ್ಲ.

ಸಪ್ತಾಹದಲ್ಲಿ ನಾನೂ ಮಹದೇವ, ಇಬ್ಬರೂ ದುಪ್ಪಟ್ಟು ಕೆಲಸ ಮಾಡಿದೆವು. ಸರದಾರರಿಗೆ ಇನ್ನೂ ನೂಲು ತೆಗೆಯುವುದರ ಧ್ಯಾಸ ಹತ್ತಿಲ್ಲ. ಮೂರೂ ಮಂದಿ ಉಪವಾಸ ಮಾಡಿದೆವು.

ಯರವಡಾ ಮಂದಿರ, ೧೮-೪-೩೨

ಬಾಪೂನ ಆಶೀರ್ವಾದ.

## ೩೦

......ರನ್ನು ಬಲಾತ್ಕಾರವಾಗಿ ತಿರುಗಾಡಲಿಕ್ಕೆ ಕರೆದುಕೊಂಡು ಹೋಗಬಾರದು. ಆಕೆಗೆ ಉತ್ಸಾಹವಿರದಿದ್ದರೆ ಆಕೆ ತಿರುಗಲಾರಳು. ಆಕೆಗೆ ಪ್ರಾಣಾಯಾಮ ಕಲಿಸಿ, ಕೆಲವು Passive ಕಸರತ್ತು ಕಲಿಸಿದರೆ ಸಾಕು. ಈ ಕಸರತ್ತು ನಿನಗೆ ಗೊತ್ತಿವೆ.

ಯಾರೂ ಎಂದೂ ಧರ್ಮ ಬದಲಿಸಲೇಬಾರದು ಎಂದು ನನ್ನ ಅಭಿಪ್ರಾಯವಲ್ಲ. ಆದರೆ ನಾವು ಒಬ್ಬರಿಗೊಬ್ಬರು ಧರ್ಮ ಬದಲಿಸುವಂತೆ ಪ್ರೇರಿಸುತ್ತ ಹೋಗಬಾರದು. ನನ್ನ ಧರ್ಮವೇ ಸತ್ಯ, ಉಳಿದವರ ಧರ್ಮ ಸುಳ್ಳು ಎಂಬ ಭಾವ ಇಂಥ ಪ್ರೇರೇಪಣೆಯ ಹಿಂದೆ ಇರುತ್ತದೆ. ಅದು ದೂಷಿತ ಭಾವ. ಬಲಾತ್ಕಾರದಿಂದಲೋ, ಅಜ್ಞಾನದಿಂದಲೋ ತನ್ನ ಧರ್ಮ ಬಿಟ್ಟವನು ಮತ್ತೆ ಸ್ವಧರ್ಮಕ್ಕೆ ಬರಲು ಅವಕಾಶವಿರಬೇಕು. ಇಷ್ಟೇ ಅಲ್ಲ. ಅಂಥವರಿಗೆ ಉತ್ತೇಜನ ಕೊಡಬೇಕು. ಇಂಥದನ್ನು ಧರ್ಮ ಪರಿವರ್ತನೆ ಅನ್ನಲಾಗದು. ನನ್ನ ಧರ್ಮ ನನಗೆ ಸುಳ್ಳು ಎನಿಸಿದರೆ ನಾನು ಬದಲು ಮಾಡಬೇಕಾಗುತ್ತದೆಯಲ್ಲವೆ. ಪರಧರ್ಮದಲ್ಲಿರುವ ಗುಣಗಳನ್ನು ನನ್ನ ಧರ್ಮದಲ್ಲಿ ಸೇರಿಸಿಕೊಳ್ಳಬಹುದು. ಎಲ್ಲರೂ ಹಾಗೆ ಮಾಡಬೇಕು. ನನ್ನ ಧರ್ಮ ನನಗೆ ಅಪೂರ್ಣವೆನಿಸಿದರೆ ಅದನ್ನು ಪೂರ್ಣ

ಮಾಡುವುದು ನನ್ನ ಕರ್ತವ್ಯ. ಅದರಲ್ಲಿ ದೋಷ ಕಂಡರೆ ಅದನ್ನು ದೂರ ಮಾಡುವುದೂ ಕರ್ತವ್ಯವೇ.

ಮೀರಾಬೇನ್ ಕ್ರಿಸ್ತಾನಳೆಂದು ತಿಳಿಯುತ್ತೇನೆ. ಆಕೆ ಕೂಡ ತಾನು ಕ್ರಿಸ್ತಾನಳೆಂದೇ ತಿಳಿದುಕೊಳ್ಳುತ್ತಿದಾಳೆ ಈಗ. ಕ್ರಿಸ್ತಾನಳಿದ್ದರೂ ಭಾವಪೂರ್ಣಳಾಗಿ ಶ್ರದ್ಧೆಯಿಂದ ಗೀತೆ ಓದುತ್ತಾಳೆ. ಇದರಲ್ಲಿ ನನಗೆ ವಿರೋಧವೇನೂ ಕಾಣುವುದಿಲ್ಲ. ನಮ್ಮ ಪ್ರಾರ್ಥನೆಯನ್ನು ಪರಧರ್ಮದವರೂ ಭಕ್ತಿಯಿಂದ ಹಾಡುತ್ತಾರೆ.

ಸ್ವರಾಜ್ಯ ಸಿಕ್ಕಮೇಲೆ ನಾನೇನು ಮಾಡುತ್ತೇನೋ ನನಗೇ ಗೊತ್ತಿಲ್ಲ. ಈಗಿನಂತೆಯೆ, ಆ ಕಾಲಕ್ಕೆ ದೇವರೇ ನನಗೆ ದಾರಿ ತೋರಿಸಬಹುದು. ಶ್ರದ್ಧಾವಂತರಾದ ಜನ ಮುಂದಿನ ಯೋಚನೆ ಮಾಡುವುದಿಲ್ಲ. ಮುಂದಿನ ಯೋಚನೆ, ಸಿದ್ಧತೆ ಮಾಡುವ ಶ್ರದ್ಧೆ ಶ್ರದ್ಧೆಯಲ್ಲ; ಹಾಗಿದ್ದರೆ ಅದು ದುರ್ಬಲಶ್ರದ್ಧೆ.

ಜ್ಞಾನ, ಉಪಾಸನೆ, ಕರ್ಮ-ಇವು ಬೇರೆ ಬೇರೆ ದಾರಿಯಲ್ಲ; ಮೂರೂ ಸೇರಿ ಒಂದೇ ದಾರಿ. ನಮ್ಮ ಅನುಕೂಲಕ್ಕಾಗಿ ಮೂರು ಭಾಗ ಮಾಡಿಕೊಂಡಿದೇವೆ. ಆಮ್ಲಜನಕ, ಜಲಜನಕ-ಎರಡೂ ಸೇರಿ ನೀರು. ಆದರೆ ನೀರು ಎಂದರೆ ಅದೂ ಅಲ್ಲ, ಇದೂ ಅಲ್ಲ. ಹಾಗೆ ಮೋಕ್ಷ ಮಾರ್ಗ ಜ್ಞಾನವೂ ಅಲ್ಲ, ಭಕ್ತಿಯೂ ಅಲ್ಲ. ಮೂರು ಕಲೆಸಿ ಮಾಡಿದ ರಾಸಾಯನಿಕ ಪ್ರಯೋಗ ಎನ್ನಬಹುದು. ಈ ಉಪಮೆಯಲ್ಲಿ ದೋಷ ವಿದ್ದರೂ ನನ್ನ ಅಭಿಪ್ರಾಯ ತಿಳಿಸಲು ಇದು ಸಾಕು.

ಯೇಸು ನೀರನ್ನು ಹೆಂಡಮಾಡಿದಂಥ ಚಮತ್ಕಾರವಲ್ಲ ದ್ರೌಪದೀ ಮಾನಸಂರಕ್ಷಣೆ. ಅದರಲ್ಲಿರುವ ಸಂಕಟ ಬಂದಾಗ ದೇವರು ಭಕ್ತರನ್ನು ಕಾಪಾಡುತ್ತಾನೆ ಎಂಬ ಶ್ರದ್ಧೆ ಉಪಯುಕ್ತವಾದದ್ದು. ಇಂಥ ಉದಾಹರಣೆ ಸಂಗ್ರಾಹ್ಯ, ಆದರೆ ಇಂಥ ಸಹಾಯದ ನಂಬಿಗೆಯಿಂದ ಭಕ್ತಿ ಮಾಡಿದರೆ ಅದು ನಿರರ್ಥಕ.

ಬಲಾತ್ಕಾರವಾಗಿ ಮೈಯನ್ನು ದೃಢಗೊಳಿಸುವ ಪದ್ಧತಿ ನನಗಿಷ್ಟವಿಲ್ಲ. ಅದಕ್ಕೆ ಬಲಾತ್ಕಾರವಿರಬಾರದು. ತಮ್ಮ ಶರೀರ ದುರ್ಬಲವಾಗಿರಲಿ

ಎಂದು ಯಾರಾದರೂ ಇಷ್ಟಪಟ್ಟಿದ್ದನ್ನು ಯಾರೂ ಕೇಳಿಲ್ಲ. ಇದು ಶಿಕ್ಷಣದ ವಿಷಯ.

ಬಯಕೆ ಕಡಮೆಮಾಡಬೇಕು-ಈ ಆದರ್ಶ ಜನಕ್ಕೆ ತಿಳಿಸಬೇಕಾದಂಥದು. ಆ ಮೇಲೆ ಪರಿಣಾಮ ಏನಾದರೂ ಆಗಲಿ. ಇದರಲ್ಲಿ (Compromise) ತೇಪೆ ಹಚ್ಚುವುದು ಎಲ್ಲಿ ಬರುತ್ತದೆ? ತೇಪೆ ಹಚ್ಚುವ ಮಾತಾಗಲಿ ಬಿಡುವುದಾಗಲಿ ಬರುವುದೇ ಇಲ್ಲ. ಹಸಿವಿನಿಂದ ಸಾಯುತ್ತಿರುವ ಬಡಜನರ ಅನುಕೂಲತೆಗಳನ್ನು (ಬಯಕೆ) ಬೆಳೆಸಲೇಬೇಕು. ಇದೇನು ಹೊಸ ಮಾತಲ್ಲ. ಆ ಪ್ರಯತ್ನ ನಡದೇ ಇದೆ.

ಯರವಡಾ ಮಂದಿರ, ೨೪-೨-೩೨

**ಬಾಪೂನ ಆಶೀರ್ವಾದ.**

## ೩೧

ನಿನಗೆ ಕೆಲಸದ ಭಾರ ಬಹಳವಾಗಿದ್ದರೆ, ಅದು ಕಡಮೆಯಾಗುವುದಿಲ್ಲ ಎಂದು ದೂರುವುದು ನನಗೆ ಸಮ್ಮತವಿಲ್ಲ. ಇದರಲ್ಲಿ ಮೋಹ, ದುರ್ಬಲತೆ ಇದೆ. ನಿನಗೆ ಸಿಡಿ ಸಿಡಿ ಎನ್ನಿಸಲಿಕ್ಕೆ ನಿನ್ನ ಸ್ವಭಾವವೇ ಕಾರಣ. ಕೆಲಸದ ಭಾರ ಅದರ ಕಾರಣವಲ್ಲವೆಂದು ನಾನು ತಿಳಿದಿದೇನೆ. ಹಾಗಿದ್ದರೆ ಕ್ರಮೇಣ ನೀನು ಸವೆದು ಹೋದೀಯೆ. ಆತ್ಮವಂಚನೆ ಯಾರಿಗೂ ಬಹಳ ಕಾಲ ಸಾಧ್ಯವಿಲ್ಲ. ಈ ವಿಷಯದಲ್ಲಿ ನಿನಗೆ ತೊಂದರೆಕೊಡುವ ಇಷ್ಟವಿಲ್ಲ. ನಿನ್ನ ಸೂಕ್ಷ್ಮಪ್ರಕೃತಿಯನ್ನು ದೃಢಮಾಡಿಕೋ.

ನಮ್ಮ ಸಂಗ್ರಹದಲ್ಲಿ ಬಹಳ ಉರ್ದು ಪುಸ್ತಕ ಇವೆ. ಅದರಲ್ಲಿ ಎಷ್ಟೋ ಇಮಾಂಸಾಹೇಬರ ಮನೆಯಲ್ಲಿರಬಹುದು; ಅಲ್ಲಿ ಹುಡುಕು. ನಿನಗೆ ಓದಲು ಬಾರದಿದ್ದರೆ ಪರಶುರಾಮ, ಅದರ ಹೆಸರು ಓದಿ ತೋರಿಸುತ್ತಾನೆ. ಅದರಲ್ಲಿ ಮೌಲಾನಾ ಶಿಬ್ಲಿ ಬರೆದ 'ಸೀರತ್-ಉಸ್-ನಬಿ' ಇದ್ದರೆ ಕಳಿಸು. ಡಾ. ಮಹಮ್ಮದಲ್ಲಿಯ ಪೈಗಂಬರನ ಜೀವನಚರಿತ್ರೆಯನ್ನೂ ಕಳಿಸು. 'ಸೀರತ್' ೨ ಭಾಗ ಇವೆ.

ಅಲ್ಲಿ ಸುತ್ತಲೂ ಕೂಲಿಕಾರರಿದ್ದಾರೆ. ಅದೇ ನಿಜವಾದ ಜೀವನ. ಅದೇ ಆಶ್ರಮದ ಕಲ್ಪನೆ. ಈ ಕೂಲಿಕಾರರು ನಿಜವಾಗಿ ಸತ್ಯಾರ್ಥಿಗಳಿರ

ಬೇಕು. ನೀನಲ್ಲವೆ? ಉಳಿದ ಸೋದರಸೋದರಿಯರು ಅಲ್ಲವೇ? ಯಥಾಶಕ್ತಿ ಎಲ್ಲರೂ ಸತ್ಯಾರ್ಥಿಗಳೇ! ನೀವು ಯಾವಾಗ ಬರುತ್ತೀರಿ ಎಂದು ಕೇಳುತ್ತೀಯೆ. ಸ್ವಲ್ಪ ಕಣ್ಣು ತೆರೆದು ನೋಡಿದರೆ ನಾನು ಅಲ್ಲಿಯೆ ಇರುವುದು ನಿನಗೆ ಕಾಣದಿರದು. ನನ್ನ ಆತ್ಮವಂತೂ ಅಲ್ಲಿಯೆ ವಾಸ ಮಾಡುತ್ತಿದೆ. ಎಂದಮೇಲೆ ನನ್ನ ದೇಹ ಇದ್ದರೇನು ಬೂದಿಯಾದರೇನು? ನನ್ನ ದೇಹ ಅಲ್ಲಿದ್ದಾಗ ನನ್ನ ಆತ್ಮ ಅಲ್ಲಿರದಿರುವ ಸಂಭವವೂ ಉಂಟು. ಈ ಸತ್ಯವನ್ನು ನೀನು ಕಾಣು; ಮಾಯೆಯನ್ನು ಹರಿ.

ಅತೃಪ್ತಿ ಬೇಕು. ಆದರೆ ಅದು ನಮ್ಮ ವಿಷಯದಲ್ಲಿ. ಇನ್ನೇನು ನಾನು ಪೂರ್ಣನಾದೆ ಎಂದು ತಿಳಿದುಕೊಂಡು ಕುಳಿತ ದಿನವೇ ನನ್ನ ಅಧೋಗತಿ ಮೊದಲಾಯಿತೆಂದು ತಿಳಿ. ಅಂತಲೇ ನನ್ನ ಬಗ್ಗೆ ನನಗೆ ಅತೃಪ್ತಿ ಎನಿಸಲೇಬೇಕು. ಈ ಅತೃಪ್ತಿಗೆ ನನ್ನ ಕರ್ತವ್ಯಕರ್ಮ ಬದಲು ಮಾಡಬೇಕೆಂದು ಅರ್ಥವಲ್ಲ! ಎಂದಿಗೂ ಅಲ್ಲ.

ಇದನ್ನೆಲ್ಲ ಯುಕ್ತಿವಾದದಿಂದ ತಿಳಿಸಲು ಬಾರದು. ಕಾಲ ತನ್ನ ಕೆಲಸ ತಾನು ಮಾಡುತ್ತದೆ. ಈಗ ಕಾಳ್ಗತ್ತಲೆ ಕಾಣುವ ಕಡೆ ನಾಳೆ ಬೆಳಕಾದೀತು. ಇಂಥ ಸ್ಥಿತಿಯನ್ನು ವರ್ಣಿಸುವ ಭಜನೆ ನನಗಂತೂ 'ಕರುಣಾಳು ಬೆಳಕೆ' ಗೀತ! ಇಂಗ್ಲೀಷಿನಲ್ಲಿ ಆ ಗೀತ ಅಲೌಕಿಕವಾಗಿದೆ.

ನಿನ್ನ ತೂಕ ಎಷ್ಟು? ಹಾಲುಮೊಸರು ಎಷ್ಟು ತೆಗೆದುಕೊಳ್ಳುತ್ತೀಯೆ?

ಯರವಡಾ ಮಂದಿರ, ೧-೫-೩೨

**ಬಾಪೂನ ಆಶೀರ್ವಾದ.**

**೩೨**

ಆಧ್ಯಾತ್ಮಿಕ ಸಿಂಹಾವಲೋಕನ, ಅಂತರ್ನಿರೀಕ್ಷೆ ಮೊದಲಾದರೆ ಕೃತ್ರಿಮ ಸಂಕೋಚ ಮಾಯವಾಗುತ್ತದೆ; ನಮ್ಮ ನೈಜಸ್ವಭಾವ ಜಗತ್ತಿಗೆ ಕಾಣುತ್ತದೆ. ಸತ್ಯಶೀಲರಿಗೆ ಮಾತ್ರ ಇದು ಅನ್ವಯಿಸುತ್ತದೆಂಬುದು ಸ್ಪಷ್ಟವೇ. ಡಾಂಭಿಕರಿಗೆ ಈ ತರದ ಆತ್ಮಪರಿಶೀಲನೆ ಸಾಧ್ಯವಲ್ಲ.

......ರ ವಿಷಯವಾಗಿ ನೀನು ಬರೆದುದೆಲ್ಲ ನಿಜ. ತನ್ನ ಕೈಲಾಗದುದನ್ನು ಆತ ಹಿಡಿಯಬಾರದು; ಯಾರೂ ಹಿಡಿಯಬಾರದು. ಸಾಧಾರಣವಾಗಿ ತನಗೆ ತಾನೇ ಮೋಸಮಾಡಿಕೊಳ್ಳುವುದು ಮನುಷ್ಯನ ಸ್ವಭಾವ. ತನ್ನ ವಿಷಯದಲ್ಲಿ ತನಗೆ ಬಹಳ ಔದಾರ್ಯ ಮಾಡಿದ್ದು ಸ್ವಲ್ಪವಾದರೂ ಬಹಳ ಎಂದು ತಿಳಿಯುತ್ತಾನೆ. ಯಾರಾದರೂ ಅತಿಯಾಗಿ ಕೆಲಸ ಮಾಡಿದರೆ ಅದನ್ನೂ ಬೇಡವೆನ್ನುವುದು ನನಗೆ ಸಾಧ್ಯವಿಲ್ಲ.

ಪರಿಶೀಲನೆ ಮಾಡಿಕೊಳ್ಳುವ ಮಾತು ಬರೆದೆ. ಅದರಿಂದ ಯಾರೂ ಜಡರಾಗುವ ಸಂಭವವಿಲ್ಲ. ಆಶ್ರಮದಲ್ಲಿದ್ದು ಯಾರಾದರೂ ಜಡರಾದರೆ ಕಾರ್ಯಪದ್ಧತಿಯಲ್ಲಿಯೇ ಏನೋ ದೋಷವಿರಬೇಕು. ಕಾರ್ಯಪದ್ಧತಿ ಪರಿಪೂರ್ಣವಲ್ಲ; ನಾನು ಬಲ್ಲೆ. ಆದರೆ ಆಶ್ರಮದಲ್ಲಿರುವವರು ಯಾರೂ ಜಡರಾಗಿಲ್ಲ. ಅಷ್ಟೇಕೆ? ಮೊದಲು ಜಡರಾಗಿದ್ದವರು ಒಳ್ಳೆ ಚುರುಕಾಗಿದಾರೆ. ಅದರಿಂದ ನನಗೆ ಹೀಗೆ ಅನಿಸುತ್ತದೆ: ಏನಿಲ್ಲದಿದ್ದರೂ ಈ ಕಾರ್ಯಪದ್ಧತಿ ಶೇಕಡಾ ೫೧ ರಷ್ಟು ಕಾರ್ಯಸಾಧಕವಾಗಿರಬೇಕು. ಆಶ್ರಮದ ಬೇರೆ ಬೇರೆ ವಿಭಾಗಗಳ ಸಂಚಾಲಕರು ಅದರದರಲ್ಲಿ ನಿಪುಣರಾಗಿಲ್ಲ. ನಿಜ. ಇದರಲ್ಲಿ ಯಾರ ತಪ್ಪೂ ಇಲ್ಲ. ಆದರೆ ಒಂದು ಮಾತ್ರ ಕಾಣುತ್ತಿದೆ; ಆಶ್ರಮದಲ್ಲಿ ಹೊಸ ವೃತ್ತಿಯೊಂದು ಮೂಡಿದೆ. ಹಳೆಯ ವೃತ್ತಿಗೆ ಹೊಸ ರೂಪು ಕೊಡುತ್ತಿದೆ. ಇದರಿಂದ ನೈಪುಣ್ಯವುಳ್ಳ ಜನ ತಾವೇ ಸಿದ್ಧರಾದಾರು. ಇದರಲ್ಲಿ ಹಣ, ಕಾಲ ಎರಡೂ ಸ್ವಲ್ಪ ಮಿತಿಮೀರಿ ವೆಚ್ಚವಾಗುತ್ತಿವೆ. ಹೀಗಿದ್ದರೂ ಅನೇಕ ಸಲ ಆಶ್ರಮಕ್ಕೆ ಕಳೆ ಬಂದಿಲ್ಲ. ಆದರೆ ಆಶ್ರಮ ಶೋಭೆಗಾಗಿ ಅಲ್ಲ! ಸೇವೆಗಾಗಿ ಇದೆ. ಸೇವೆ ಮಾಡುಮಾಡುತ್ತ ಕಳೆ ಬಂದರೆ ಒಳಿತೇ. ಜನರು ನಿಂದೆಯನ್ನೇ ಮಾಡಿದರೂ ಸೇವೆ ಮಾಡಬೇಕು. ನಾವು ಕುಶಲರಾದ ಹಾಗೆ ನಮ್ಮ ಕೆಲಸದ ಪ್ರಮಾಣ ಬೆಳೆಯುತ್ತದೆ; ಕೆಲಸದ ಭಾರವೂ ಕಡಮೆಯಾಗುತ್ತದೆ. ಇದಕ್ಕೆ ಹೊಚ್ಚಹೊಸ ಉದಾಹರಣೆ, ನಾನು ಎಡಗೈಯಿಂದ ನೂತದ್ದು. ಹೊಸದಾಗಿ ತೆಗೆದಾಗ ೯೩ ಎಳೆ (೪ ಅಡಿಗೊಂದು ಎಳೆ) ಆಯಿತು. ಹೊತ್ತೂ ಹೆಚ್ಚು ಹಿಡಿಯಿತು, ಆಯಾಸವೂ ಬಹಳಾಯಿತು. ಕುಶಲತೆ ಹೆಚ್ಚಿದಂತೆ ಎರಡೇ ತಾಸಿನಲ್ಲಿ

೨೦೦ ಎಳೆ ತೆಗೆದೆ. ಈಗ ಮಗನ್‌ರಾಟೆ ಪ್ರಾರಂಭಿಸಿದೇನೆ. ನಿನ್ನೆ ೨೪ ಎಳೆ ತೆಗೆದೆ; ಹೊತ್ತು ಬಹಳ ಹಿಡಿಯಿತು. ಈ ದಿನ ಸ್ವಲ್ಪೇ ಹೊತ್ತಿನಲ್ಲಿ ೫೬ ಎಳೆ; ಆಯಾಸ ಕಡಮೆ. ಒಬ್ಬ ಮನುಷ್ಯನ ವಿಷಯಲ್ಲಿ, ಒಂದು ಸಣ್ಣ ಕೆಲಸದ ವಿಷಯದಲ್ಲಿ ನಿಜವಾದುದು ದೊಡ್ಡ ಸಂಸ್ಥೆಯ ವಿಷಯದಲ್ಲಿಯೂ ನಿಜವಾಗಿರಬೇಕು. 'ಯೋಗಃ ಕರ್ಮಸು ಕೌಶಲಂ.' ಕರ್ಮ ಎಂದರೆ ಸೇವಾಕಾರ್ಯ; ಯಜ್ಞ. ನಮ್ಮ ಆ ಕುಶಲತೆಯೇ ನಮ್ಮ ಎಲ್ಲ ತೊಂದರೆ. ಕುಶಲತೆ ಬಂದರೆ ಇಂದು ಕಷ್ಟವಾಗಿ ಕಂಡದ್ದೇ ನಾಳೆ ಆನಂದದಾಯಿಯಾದೀತು. ಸುವ್ಯವಸ್ಥಿತ, ಸಾತ್ವಿಕತಂತ್ರವಿದ್ದರೆ ಕೆಲಸ ಭಾರ ಅನಿಸುವದಿಲ್ಲ.

ಇದನ್ನು ಸಾಧಿಸಲೆಂದೇ ನೀನು ಆಶ್ರಮಕ್ಕೆ ಬಂದಿದ್ದೀಯೆ. ಅಲ್ಲಿ ಕಲಿಸುವವರು ಯಾರೂ ಇಲ್ಲ. ಅಲ್ಲಿನ ವಾತಾವರಣದಿಂದ ಎಲ್ಲರೂ ತಾವೇ ಗ್ರಹಿಸಬೇಕು; ಹಾಗೆ ಗ್ರಹಿಸಲಾರದವರು ಆಶ್ರಮದಲ್ಲಿ ಕೊನೆಯವರೆಗೆ ಉಳಿಯಲಾರರು. ಮಹತ್ವಾಕಾಂಕ್ಷೆಯೇ ಇಲ್ಲದವರು ಉಳಿದರೂ ಉಳಿದಾರು. ಆಶ್ರಮ ಸ್ವತಂತ್ರ ಸಂಸ್ಥೆ; ಯಾರು ಯಾರಿಗೆ ಎಷ್ಟೆಷ್ಟು ಮೇಲೆ ಏರುವ ಶಕ್ತಿಯಿದೆಯೋ ಅಷ್ಟಷ್ಟು ಮೇಲೇರಬಹುದು. ಯಾರೂ ಅವರನ್ನು ಹತ್ತಿಸಲಾರರು. ನಿನಗೆ ಅನುಕೂಲವಾದ ವಾತಾವರಣವನ್ನು ನೀನೇ ಉಂಟುಮಾಡಿಕೊಳ್ಳಬೇಕು. ನಿನ್ನ ಗೆಳತಿಯರನ್ನು ನೀನು ಸೆಳೆದು ತರಬಹುದು. ಆದರೆ ಅದು ಸ್ವಾರ್ಥ ಎನ್ನಬೇಕು. ಆಶ್ರಮದಲ್ಲಿದ್ದವರೇ ನಿನ್ನ ಗೆಳೆಯಗೆಳತಿಯರು. ನಿನ್ನ ಶಕ್ತಿ ನೀನವರಿಗೆ ನೀಡು, ಅವರ ಬಲ ನಿನಗವರು ನೀಡಲಿ. ಒಬ್ಬಿಬ್ಬರ ವಿನಾ ಯಾರೂ ಅಂಥ ಯೋಗ್ಯರಿಲ್ಲ ಅನಿಸಿದರೆ ನೀನು ಮೋಹಕೂಪದಲ್ಲಿ ಬಿದ್ದ ಹಾಗೆ. ನಮಗೆ ಏನೂ ದಾನ ಮಾಡುವ ಯೋಗ್ಯತೆಯಿಲ್ಲದವರು ಪ್ರಪಂಚದಲ್ಲಿ ಒಬ್ಬರೂ ಇಲ್ಲ.

ರಾಮಕೃಷ್ಣರ ವಿಷಯವಾಗಿ ನೀನು ಬರೆದದ್ದು ನಿಜವಿರಬಹುದು. ನಾನು ಸಿದ್ಧಪುರುಷ ಎಂದು ನಾನೊಪ್ಪುವುದಿಲ್ಲ. ಅಂತೇ ನನ್ನಿಂದ ತಪ್ಪು ಆಗುತ್ತಿರಬೇಕು. ಆದರೆ ನನ್ನ ತಪ್ಪು ನಿರ್ದೋಷವಾದ್ದರಿಂದ ಅದರ

ಪರಿಣಾಮ ಕೆಡುಕಾಗಿಲ್ಲ. ಅದಕ್ಕೇ ನಾನೂ ನಿಶ್ಚಿಂತನಾಗಿ ದಾರಿ ಸಾಗಿಸಿದ್ದೇನೆ; ಸಂಗಡಿಗರನ್ನೂ ಆ ದಾರಿಯಲ್ಲಿ ಎಳೆದಿದ್ದೇನೆ.

ಯರವಡಾ ಮಂದಿರ, ೭–೫–೩೨

**ಬಾಪೂನ ಆಶೀರ್ವಾದ.**

ಸೂಚನೆ: ಪ್ರಾರ್ಥನೆಯ ವಿಷಯವಾಗಿ ಬಹಳ ಟೀಕೆಯಾಗಿದೆ. ಆದರೂ ೧೬ ವರ್ಷದಿಂದ ನಡೆದೇ ಇದೆ. ದಿನವೂ ಪ್ರಾರ್ಥನೆಗೆ ಎಷ್ಟು ಹೊತ್ತು ಹಿಡಿಯುತ್ತದೆ? ಎಷ್ಟು ಹೊತ್ತು ಉಳಿಸಬಹುದು? ಪ್ರಾರ್ಥನೆ ಅಗತ್ಯ ಎಂದು ನೀನೊಪ್ಪಿದರೆ, ಅದಕ್ಕೆ ಹಿಡಿಯುವ ಕಾಲದ ಬಗ್ಗೆ ನೀನು ವಿರೋಧಮಾಡಲಾರೆ. ಎಲ್ಲಾ ದೃಷ್ಟಿಯಿಂದ ವಿಚಾರ ಮಾಡಿದರೆ ಇದು ಸರಿ ಎನಿಸುತ್ತದೆ. ಪ್ರಾರ್ಥನೆಯಲ್ಲಿ ಏನೇನು ಬದಲಾಗಬೇಕೋ ತಿಳಿಸು. Passive Exercise ದುರ್ಬಲರಿಗೆ ಹಿತಕಾರಿ; ಮೈ ತಿಕ್ಕುವುದು, ಅರ್ಧ ಶೀರ್ಷಾಸನ, ಅರ್ಧ ಸರ್ವಾಂಗಾಸನ, ನಿಧಾನವಾಗಿ ಕೈಕಾಲು ಎತ್ತುವುದು. ಇದರಲ್ಲಿ ರೋಗಿ ಮಲಗಿಯೇ ಇದ್ದು ಮಾನಸಿಕ ಸಹಕಾರ ಮಾಡುತ್ತಾನೆ.

೩೩

ನಿನ್ನ ತೂಕ, ಆಹಾರದ ವಿಷಯ ಕೇಳಿದ್ದು ನಿನ್ನ ಪ್ರಕೃತಿಯ ಬಗ್ಗೆ ನನಗೆ ಅನುಮಾನವಾದ್ದರಿಂದ. ಬಹಳ ಹೆಚ್ಚು ಎಂದರೆ ಎಷ್ಟು ತೂಕ? ಟೊಮಾಟೋ, ಸೊಪ್ಪಿನಪಲ್ಯ ಇಲ್ಲವೇ ಇಲ್ಲೇನು? ಶಾಲಡ್‌ಪಲ್ಯ ಬೆಳೆಸುವುದೇನಾಯಿತು? ಶಾಲಡ್ ಅಥವಾ ಮೆಂತೆಪಲ್ಯವನ್ನು ಸಣ್ಣದೊಂದು ಪಾತಿ ಮಾಡಿ ನೀನೇ ಹಚ್ಚಬಹುದು. ಸ್ವಲ್ಪ ದಿನದಲ್ಲೇ ಅವು ಬೆಳೆದುಬರುತ್ತವೆ. ಅಂತೂ ಯಾವುದಾದರೂ ಒಂದು ಹಸಿಸೊಪ್ಪಿನ ಪಲ್ಯ ತಿನ್ನುವುದು ಅಗತ್ಯ. ಹಸಿ ಆದುದರಿಂದ ಸ್ವಲ್ಪ ತಿನ್ನಬೇಕು. ಅದರ ಬೀಜ ಚೆಲ್ಲುವುದೂ ಸುಲಭ. ಟೊಮಾಟೋ ಹನ್ನೆರಡೂ ತಿಂಗಳು ಆಗದೆ ಇರಲು ಕಾರಣವೇನೋ ನನಗೆ ಗೊತ್ತಿಲ್ಲ. ನೀನೇ ಕಂಡು ಹಿಡಿ.

......ರನ್ನು ಒಡನೆಯೆ ಹೋಗಿ ನೋಡಿದೆ. ಈಗಲೂ ಅವರ

ಸಮಾಚಾರ ತಿಳಿದುಕೊಳ್ಳುತಿರುತ್ತೇನೆ. ಕೂಚಿ * ನಲ್ಲಿ ಅವರ ಪರಿಚಯ ಚೆನ್ನಾಗಿ ಆಯಿತು. ಅಲ್ಲದೆ ನಿನ್ನ ದೆಸೆಯಿಂದಲೂ ಅವರ ಜೀವನ ನನಗೆ ಮಧುರವಾಗಿದೆ. ನಿನ್ನ ಜೀವನದಲ್ಲೂ ನನಗೆ ಮಾಧುರ್ಯ ಕಾಣುತ್ತಿದೆ; ಅದೇ ಕಾರಣ. ಇದು ವ್ಯಕ್ತಿಗತ ಪ್ರೇಮದ ಉದಾಹರಣೆಯಲ್ಲ, ಅಹಿಂಸೆಯ ಉದಾಹರಣೆ. ಒಬ್ಬರ ಮೇಲೆ ಪ್ರೀತಿ, ಇನ್ನೊಬ್ಬರ ಮೇಲೆ ದ್ವೇಷ; ಅಥವಾ ಇತರರ ಮೇಲೆ ಪ್ರೀತಿಯೇ ಇಲ್ಲದಿರೋಣ–ಇದು ಪ್ರೇಮವಿಶೇಷ ಅನ್ನಬೇಕು. ನನ್ನದು ಇಂಥ ಪ್ರೇಮವಿಶೇಷವಲ್ಲ. ನಿನಗೆ ಏನು ಬೇಕೋ ತಿಳಿದುಕೊಂಡು ನಾನದನ್ನು ಮಾಡುತ್ತೇನೆ. ನಿನಗೆ ನನ್ನ ಸಹಾಯಬೇಕು; ನನಗೆ ನಿನ್ನ ಸಹಕಾರಬೇಕು. ನೀನು ಬಹಳ ದೊಡ್ಡ ಕೆಲಸ ಮಾಡಬೇಕೆಂದು ನನಗಾಸೆಯಿದೆ. ಇದರಲ್ಲಿ ನನ್ನ ವ್ಯವಹಾರ ಬುದ್ಧಿ ನಿನಗೆ ಕಂಡರೆ ನಾನು ಇಲ್ಲವೆನ್ನುವುದಿಲ್ಲ. ಇದನ್ನು ನಾನು ಅಹಿಂಸಕ ಸ್ವಭಾವ ಎನ್ನುತ್ತೇನೆ.

ಉರ್ದು ಪುಸ್ತಕಗಳ ವಿಷಯ ನೀನು ಮರೆತಿರಲಿಕ್ಕಿಲ್ಲ.

ಆಶ್ರಮದವರೆಲ್ಲ ಒಟ್ಟಿಗೆ ಒಂದೇ ಸಾರಿ ಜೈಲಿಗೆ ಹೋಗಲು ಸಿದ್ಧವಾಗಿದ್ದರೆ, ನನಗೇನೋ ಅದು ಸರಿಯೆನಿಸದು. ಆಶ್ರಮಕ್ಕೆ ಈಗ ಎಷ್ಟೋ ವಯಸ್ಸಾಗಿದೆ. ಈ ವಿಷಯವಾಗಿ ನಾನು ಚರ್ಚೆಯನ್ನೂ ಮಾಡಬಾರದು, ದುಃಖಪಡಲೂ ಬಾರದು. ಎಲ್ಲಿಯೋ ಏನು ತಪ್ಪಾಗುತ್ತಾ ಇದೆ ಎಂದು ತಿಳಿದುಕೊಂಡು ಅದನ್ನು ತಿದ್ದುವ ಕಾಲ ಬಂದಾಗ ತಿದ್ದಿದರಾಯಿತು. ಸುಲಭವಾಗಿ ಹೇಳಿ ನಿಲ್ಲಿಸಬಹುದಾದವರನ್ನು ತಡೆಯುತ್ತೇನೆ. ಒಂದೇ ಸಲಕ್ಕೆ ಆಶ್ರಮ ಬರಿದಾಗುವಂತಿದ್ದರೆ, ನೀನು ಸಂತೋಷವಾಗಿ ಅಲ್ಲಿ ನಿಲ್ಲಬಲ್ಲೆಯಾದರೆ ಇರು. ಕಾರ್ಯಕರ್ತರು ತಿರುಗಿ ಬಂದ ಮೇಲೆ ನೀನು ಹೊರಬೀಳಬಹುದು. ಆದರೆ, ನೀನೂ ಅಲ್ಲಿರುವವರೂ ಏನು ನಿರ್ಧಾರ ಮಾಡುತ್ತೀರೋ ಇಲ್ಲಿ ಕೂತು ನನಗೇನು ತಿಳಿಯಬೇಕು.

೧೨–೫–೩೨

ಆಶ್ರಮದ ವಿದ್ಯಾಭ್ಯಾಸದ ಮಾತು ಹಳೆಯದು. ಬೋರ್ಡಿಂಗು

---

* ದಾಂಡಿ ಸತ್ಯಾಗ್ರಹದ ಕೂಚು.

ಗಳಿಗೆ ಇದನ್ನೂ ಹೋಲಿಸಲು ಬಾರದು. ನಾನೊಂದು ನಿಯಮ ಹಾಕಿ ಕೊಡಬಹುದು. ಹುಡುಗರಿಗೆ ಪ್ರತಿಯೊಂದು ವಿಷಯವೂ ಜೀರ್ಣವಾಗ ಬೇಕು. ಬಲಾತ್ಕಾರವಾಗಿ ಗಂಟಲಲ್ಲಿ ತುರುಕಿದ್ದೆಲ್ಲ ನಿರರ್ಥಕ. ಬಲಾತ್ಕಾರದ ಪರಂಪರೆ ಶಾಶ್ವತವಾಗಿ ನಿಂತೀತು. ರಜೆ ಕೊಡದೆ ಇದ್ದರೆ ಅದು ಹುಡುಗರಿಗೆ ಮನಸೊಪ್ಪುವ ಹಾಗಿರಬೇಕು.

ಆಶ್ರಮದ ಶಾಲೆಯಲ್ಲಿ ನೀನು ಏನೇನು ಮಾಡಿದೆಯೋ ಅದರ ನ್ಯಾಯಾಧೀಶನಾಗುವುದು ನನಗೆ ಬೇಕಾಗಿಲ್ಲ. ನಾನು ಅಲ್ಲಿ ಇದ್ದಿದ್ದರೆ ಅವಶ್ಯಕವಾದ ಚಿಕಿತ್ಸೆ ಮಾಡುತ್ತಿದ್ದೆ. ಇಲ್ಲಿ ಕೂತು ಹಾಗೆ ಮಾಡಲು ಬಾರದು. ಆತ್ಮನಿರೀಕ್ಷಣೆ ಮಾಡುವವಳು ನೀನು. ದೋಷವೇನಾದರೂ ಇದ್ದರೆ ಅದನ್ನು ತಿದ್ದಿಕೊಂಡೇ ತಿದ್ದಿಕೊಳ್ಳುತ್ತೀಯೆ.

ನಿನಗೆ ಬ್ರಹ್ಮಜ್ಞಾನ ಕಲಿಸುವ ಇಚ್ಛೆ ನನಗಿದೆಯೋ ಇಲ್ಲವೋ ದೇವರೇ ಬಲ್ಲ. ಆದರೆ ನನಗೆ ಬ್ರಹ್ಮಜ್ಞಾನ ಗೊತ್ತಿದೆ ಎಂದು ಹೇಳಿ ನಿನ್ನ ಅಜ್ಞಾನ ನೀನು ಪ್ರಕಟಮಾಡಿದೆ. ನಿನ್ನ ಯುಕ್ತಿವಾದದಿಂದಂತೂ ಅದನ್ನು ಸಿದ್ಧಮಾಡಿದ್ದೀಯೆ. ಬುದ್ಧಿಯ ಯೋಗದಿಂದ ಬ್ರಹ್ಮವನ್ನು ತಿಳಿದವನು ಬ್ರಹ್ಮವನ್ನು ತಿಳಿಯಲೇ ಆರ. ಬ್ರಹ್ಮಜ್ಞಾನ ಹೃದಯದಲ್ಲಿ ಮೂಡುತ್ತದೆ. ಪ್ರವೃತ್ತಿತ್ಯಾಗವೇ ಬ್ರಹ್ಮಜ್ಞಾನವಲ್ಲ. ಹೊರಗಿಂದ ನೋಡಿದರೆ ಜ್ಞಾನಿ ಅಜ್ಞಾನಿಗಳಿಬ್ಬರೂ ಒಂದೇ ರೀತಿ ಕಾಣುತ್ತಾರೆ. ಆದರೆ ಇಬ್ಬರ ಪ್ರವೃತ್ತಿ ಹೇತು ಉತ್ತರ ದಕ್ಷಿಣದಷ್ಟು ವಿರುದ್ಧ! ರಾಮನಾಮವೇನು ಬ್ರಹ್ಮಜ್ಞಾನ ವಿರೋಧಿಯಲ್ಲ. ಎರಡೂ ಒಂದೇ ಇರಲೂಬಹುದು. ರಾಮನಾಮವನ್ನೂ ಸ್ವೀಕರಿಸಬೇಕೋ ಬಿಡಬೇಕೋ ಎಂದು ಕೇಳುವ ಬ್ರಹ್ಮಜ್ಞಾನಿ ಅಜ್ಞಾನಕೂಪದಲ್ಲಿ ಬಿದ್ದಿದಾನೆ ಎನ್ನಬೇಕು; ಅದರಲ್ಲಿ ಮುಳುಗುತ್ತಿದಾನೆ ಎನ್ನಬೇಕು. ಸುಮ್ಮನೆ ರಾಮನಾಮ ಬಡಬಡಿಸುವವನು ವ್ಯರ್ಥವಾಗಿ ತುಟಿ ಒಣಗಿಸುತ್ತಾನೆ; ಕಾಲಹರಣ ಮಾಡುತ್ತಾನೆ. ನಾನು ಇದುರಿಗಿರಬೇಕೆಂಬಾಸೆ, ಬ್ರಹ್ಮಜ್ಞಾನ–ಎರಡರಲ್ಲಿ ವಿರೋಧವಿರಲೇಬೇಕಾಗಿಲ್ಲ. ಆದರೆ ನಾನು ಇದುರಿಗಿಲ್ಲವೆಂದು ನಿಮ್ಮ ಕರ್ತವ್ಯಪರಾಯಣತೆ ಕಡಮೆಯಾದರೆ ಅದು

ಬ್ರಹ್ಮಜ್ಞಾನವಲ್ಲ, ಮೋಹ. ನನಗೆ ಬ್ರಹ್ಮಜ್ಞಾನವಾಗಿದೆ ಎಂದವರಿಗೆ ಅದು ಇಲ್ಲದಿರುವ ಸಂಭವ ಪೂರಾ ಇದೆ. ಅದು ಮೂಕಜ್ಞಾನ, ಸ್ವಯಂ ಪ್ರಕಾಶ. ಸೂರ್ಯ ತನಗೆ ಬೆಳಕಿದೆಯೆಂದು ಬಾಯಿಂದ ಹೇಳಬೇಕಾಗಿಲ್ಲ. ಬೆಳಕಿದ್ದುದು ನಮಗೆ ಕಂಡೇ ಕಾಣುತ್ತದೆ. ಬ್ರಹ್ಮಜ್ಞಾನದ ವಿಷಯವೂ ಹಾಗೆಯೆ.

ಈ ಸರಕಾರದಿಂದ ನಮ್ಮ ದೇಶಕ್ಕೆ ಲಾಭವೇ ಆಗುತ್ತದೆಯೆಂದು ಈ ಸರಕಾರವನ್ನು ನಾನು ನಂಬಿದ್ದಾಗ ನನಗನಿಸುತ್ತಿತ್ತು. ಅವರ ಉದ್ದೇಶ ಒಳ್ಳೆಯದು ಅನಿಸುತ್ತಿತ್ತು. ಈ ಮಾತಿನಲ್ಲಿ ಆಳವಾಗಿ ಹೋಗಲಾಗದು.

ಅಮೇರಿಕಾದಲ್ಲಿ ಸ್ತ್ರೀ ಪುರುಷರ ಸಂಬಂಧದ ಬಗ್ಗೆ ಅಚ್ಚಿಸುವ ಸಾಹಿತ್ಯ ನನಗೆ ಸೇರುವುದಿಲ್ಲ. ಈ ಬಗ್ಗೆ ಬರೆಯಬೇಕೆಂದಿದೇನೆ; ನಿಜ.

ಹುಡುಗರು ಪ್ರಶ್ನೆ ಕೇಳಿದರೆ ಅವರಿಗೆ ಸೇರಾದ ಉತ್ತರಕೊಡಬೇಕು. ಸಿನಿಮಾ ವಿಷಯ ನನಗೆ ಗೊತ್ತಿಲ್ಲ. ನಾಟಕಕ್ಕೆ ಸ್ಥಾನವಿದೆ. ಈಶ್ವರ ಪ್ರಾಪ್ತಿಗಾಗಿ ನನಗೆ ಅನಾಸಕ್ತಿಯೇ ಒಳ್ಳೆಯದೆಂದು ಅನಿಸುತ್ತದೆ. ಆದರಲ್ಲಿ ಎಲ್ಲವೂ ಬರುತ್ತದೆ.

೧೭-೫-೩೨

ಬಾಪೂನ ಆಶೀರ್ವಾದ.

೩೪

ಮುಂದಿನವಾರ ನನ್ನ ಭೆಟ್ಟಿಗೆ ನೀನು ಬಂದರೂ ಬರಬಹುದು. ಆದರೂ ನಿನ್ನ ಕಾಗದಕ್ಕೆ ಉತ್ತರ ಬರೆಯುವುದೇ ಒಳಿತು. ನಿನ್ನೆ ನಡೆದ ಸಂದರ್ಭದಿಂದ ನನ್ನ ಭೇಟಿ ಆದೀತೋ ಇಲ್ಲವೋ ಅನಿಶ್ಚಿತವೆನಿಸುತ್ತದೆ.

ಆಶ್ರಮದಲ್ಲಿ ಬೆಳೆದ ಹುಡುಗಿಯರು ಇಷ್ಟು ದುರ್ಬಲರಾಗಿ ಏಕೆ ಕಾಣುತ್ತಾರೋ ಇದೊಂದು ಸಮಸ್ಯೆಯಾಗಿದೆ. ನನಗಂತೂ ಅದನ್ನು ಬಿಡಿಸುವುದಾಗಿಲ್ಲ. ನಾನು ಕೆಲವು ಕಾರಣ-ಯೋಜಿಸಿದ್ದೇನೆ. ಆದರೆ ಅವಕ್ಕೆ ಆಧಾರ ಪೂರ್ಣವಾಗುವತನಕ ಚರ್ಚೆ ಮಾಡುವದು ವ್ಯರ್ಥ. ನಮ್ಮಿಂದಾದಷ್ಟು ಶೋಧನೆ ಮಾಡೋಣ. ಈ ಹುಡುಗಿಯರು ಹೊರಗೆ

ಹೋದ ಮಾತ್ರಕ್ಕೆ ಒಳ್ಳೆಯವರಾಗಿ ಬಿಡುತ್ತಾರೆ ಅನ್ನುವ ನಿಯಮ ವೇನೂ ಇಲ್ಲ. ಇದು ತಿಳಿದಿರಲಿ.

ನನ್ನ ಮಾತಿನಲ್ಲಿ ಎಲ್ಲೂ ನನಗೆ ವ್ಯಾಮಿಶ್ರತೆ ಕಾಣಿಸದು. ಇದ್ದರೆ ನನಗೆ ಗೊತ್ತಿಲ್ಲದೆ ನುಸುಳಿರಬೇಕು; ಅಥವಾ ನನಗೆ ಸಾಕಷ್ಟು ಭಾಷಾ ಪ್ರಭುತ್ವ ಇಲ್ಲದ್ದರಿಂದ ಇರಬೇಕು. ನನ್ನ ಮಾತು ತುಣುಕು ತುಣು ಕಾದ್ದರಿಂದ ನಡುನಡುವೆ ಅಧ್ಯಾಹಾರ ಬಹಳ ಇರುತ್ತವೆ.

ಇಂಗ್ಲೀಷು ಕಲಿಯಬೇಕೆನ್ನುವ ಹುಡುಗಿಯರು ಹಿಂದೀ ಸಂಸ್ಕೃತ ನೋಡಿಕೊಂಡಿದ್ದರೆ, ಗುಜರಾತಿ ಚೆನ್ನಾಗಿ ಅಭ್ಯಾಸ ಮಾಡಿ ದ್ದರೆ ಇಂಗ್ಲೀಷು ಕಲಿಯಲಿ. ಕಲಿಸುವ ಸಾಧನೆಗಳ ಮೇಲೂ ಇದು ಅವಲಂಬಿಸಿದೆ. ಇಂಥ ಅನುಕೂಲತೆ ನಮ್ಮಲ್ಲಿ ಇರಬೇಕು.

Passive ವ್ಯಾಯಾಮವೆಂದರೆ ನನ್ನ ಅರ್ಥ ನಿನಗೆ ತಿಳಿಯಲಿಲ್ಲವೋ ಏನೋ. ಸ್ವತಂತ್ರವಾಗಿ ಮಾಡುವದು Passive ಅಲ್ಲ. ಅದು ಕಾಯಿಲೆ ಯವರಿಗಾಗಿಯೇ ಪ್ರತ್ಯೇಕವ್ಯಾಯಾಮ. ನಾನು ಕಾಯಿಲೆ ಇದ್ದೆ. ನನ್ನ ಕರುಳಿಗೆ ವ್ಯಾಯಾಮ ಬೇಕಾದರೆ ಯಾರಾದರೂ ಅದನ್ನು ಸೀವಿದರೆ ತಾನೆ, ನನ್ನ ಕಾಲನ್ನು ಎತ್ತಿ ಇಳಿಸಿದರೆ ತಾನೆ. ನಾನೇ ಸ್ವಂತ ಮಾಡ ಬೇಕಾದದ್ದು ಏನೂ ಇರದಿದ್ದರೆ ಅದು Passive. ಹೀಗೆ ನೀನು ಅರ್ಥ ಮಾಡಿಕೊಂಡಂತೆ ಕಾಣುವುದಿಲ್ಲ.

ಮೌನಪ್ರಾರ್ಥನೆಯಲ್ಲಿ ಎರಡು ಉದ್ದೇಶ ಇದ್ದವು. ಮನಸ್ಸಿಗೆ ಶಾಂತಿಕೊಡುವುದಂತೂ ಇದ್ದೇ ಇತ್ತು. ಇಲ್ಲದಿದ್ದರೆ ಮನಸ್ಸು ಅಂತರ್ಮುಖಿಯಾಗುವುದು ಬಹಳ ಕಷ್ಟವಾಗುತ್ತದೆ.

ಕೈಕೊಂಡ ಪ್ರತಿಯೊಂದು ಕೆಲಸದಲ್ಲೂ, ಏನಾದರೂ ತಪ್ಪಾಗುವ ಸಂದೇಹವಿದ್ದರೆ ಮಾತ್ರ, ತಿದ್ದುಪಡೆ ಮಾಡಬೇಕು. ಅವಸರ ಅಶಾಂತಿ ಯಿಂದ ಮಾಡಬಾರದು. ಇದರಿಂದ ತಟಸ್ಥತನ ಬರುತ್ತದೆ.

ನನ್ನಲ್ಲಿ ಏಕಾಗ್ರತೆಯಿದ್ದೀತು; ನನಗೆ ಸಮಾಧಾನವಾಗುವಷ್ಟು ಇಲ್ಲ. ಆದರೆ ನಾನು ಪ್ರಯತ್ನ ಮಾಡುತ್ತಿದ್ದೇನೆ; ಆತುರವಿಲ್ಲ.

ಹುಡುಗರಿಗೆ ಪ್ರಾರ್ಥನೆ ರುಚಿಸದಿದ್ದರೆ ಅವರಿಗಾಗಿ ಬೇರೆ ವ್ಯವಸ್ಥೆ

ಮಾಡಬೇಕು. ಪ್ರಭುದಾಸ ಮಾಡಿದ ಹಾಗೆ. ಹುಡುಗರು ಶ್ರದ್ಧಾಪೂರ್ಣರಾಗಿ, ಶಾಂತರಾಗಿ ಕೂತರೆ ಸರಿ.

ಹದಿನಾರು ವರ್ಷ ಪ್ರಾರ್ಥನೆ ನಡನುಬಂದಿದೆ. ಇದು ಬರೀ ಮಾತಲ್ಲ. ಒಂದು ನಿಜವಾದ ಸಂಗತಿ. ಎಲ್ಲರೂ ಪ್ರಾರ್ಥನೆಗೆ ಬರುತ್ತಿದ್ದರೆಂದು ನಾನು ಹೇಳಬಯಸುವದಿಲ್ಲ. ಎಷ್ಟೋ ತೊಂದರೆ ಟೀಕೆ ಬಂದರೂ ಆಶ್ರಮ ಪ್ರಾರ್ಥನೆಯನ್ನು ಬಿಡದೆ ನಡಿಸಿಕೊಂಡು ಬಂದಿದೆ. ಅದರ ಮೂಲಕವಾಗಿಯೆ ಎಷ್ಟೋ ಜನ ಶಾಂತಿಯ ಚಿಂತನೆ ಮಾಡಿದಾರೆ. ಅನೇಕ ಪ್ರಬಲಕಾರಣಗಳಿಲ್ಲದೆ ಅದನ್ನು ಬಿಡಲೂ ಬಾರದು. ಬದಲೂ ಮಾಡಬಾರದು. ಇಷ್ಟು ಹೇಳುವುದೇ ನನ್ನ ಉದ್ದೇಶ.

ಭಗಿನಿಯರ ಪ್ರತ್ಯೇಕ ಪ್ರಾರ್ಥನೆ ಸಂಜೆಗೆ ಕಳೆಗಟ್ಟುವುದಿಲ್ಲ. ಸಂಜೆಗೆ ವಾಚನ ಇತ್ಯಾದಿ ಇರಲಿ.

ನಿನ್ನ ವಿಷಯವಾಗಿ ನೀನು ಬರೆಯುತ್ತಿರುವುದು ಸರಿ. ನಿನ್ನ ಬುದ್ಧಿಗೆ ಹೃದಯಕ್ಕೆ ಸರಿಯಾಗಿ ಕಂಡದ್ದನ್ನೇ ನೀನು ಮಾಡು. ನನಗೇನೂ ಅವಸರವಿಲ್ಲ. ನನಗೆ ಸರಿತೋರಿದ್ದನ್ನು ಹೇಳಿ ಮುಗಿಸುತ್ತೇನೆ. ಬಲಾತ್ಕಾರವಾಗಿ ನಿನ್ನನ್ನು ಒಪ್ಪಿಸುವ ಗೋಜಿಗೆ ಹೋಗುವುದಿಲ್ಲ. ಗೆಳೆಯನಂತೆ ನನ್ನ ಉಪಯೋಗವಾದೀತು. ಅದರಲ್ಲೂ ನನ್ನ ಅಧಿಕಾರವೆಂದರೆ, ಬಹಳವಾದರೆ ನನ್ನ ದೀರ್ಘ ಅನುಭವ; ಅಷ್ಟೆ, ಮತ್ತೇನಿದೆ ? ಅದರಲ್ಲಿ ಒಂದರದಾದರೂ ಛಾಯೆ ನಿನ್ನ ಮೇಲೆ ಬೀಳದಿದ್ದರೆ ಆ ಅನುಭವವೆಲ್ಲ ನಿರರ್ಥಕ. ಆಶ್ರಮದ ಬಗ್ಗೆ ನನ್ನದೊಂದು ಹೆಮ್ಮೆಯಿದೆ. ಸಾರಿ ಬಂದವರಿಗೆ ರೆಕ್ಕೆ ಕೊಡುತ್ತದೆ; ಹಾರಬೇಕೆಂದರೆ ಹಾರಬಹುದು. ಇದ್ದರಂತೂ ಒಳ್ಳೆಯದೇ. ಆದರೆ ಬಂದವರು ರೆಕ್ಕೆಗೊಂಡು ಹಾರಿದರೆ ಆಶ್ರಮ ತನ್ನ ಕರ್ತವ್ಯಪಾಲನೆ ಮಾಡಿದಷ್ಟಾದರೂ ಆಯಿತಲ್ಲ. ಅನೇಕ ಜನರ ವಿಷಯದಲ್ಲಿ ಮೂಲನೋಡು. ಆಶ್ರಮಕ್ಕೆ ಬಂದಾಗ ಎಷ್ಟೋ ಹುಡುಗಿಯರಿಗೆ ಉತ್ಸಾಹವೆ ಇರಲಿಲ್ಲ. ಈಗ ಅವರು ಸ್ವತಂತ್ರರೆಂದು ತಿಳಿದಿದ್ದಾರೆ; ಸ್ವತಂತ್ರರಾಗಿಯೆ ಇದ್ದಾರೆ.

ವ್ಯಕ್ತಿಪ್ರೇಮ ಅಷ್ಟೇನೂ ತಿರಸ್ಕರಣೀಯವಲ್ಲ. ಅದು ವಿಶ್ವ

ಪ್ರೇಮಕ್ಕೆ, ಪ್ರಭುಪ್ರೇಮಕ್ಕೆ ವಿರೋಧವಾಗಿರಬಾರದು, ಅಷ್ಟೆ. ಬಾ ನಲ್ಲಿ ನನಗೆ ಪ್ರೇಮವಿದೆ. ಆದರೂ ಪ್ರಭುಪ್ರೇಮದಲ್ಲಿ ಹುದುಗಿದೆ. ನಾನು ವಿಷಯಿ (ಕಾಮುಕಿ)ಯಾಗಿದ್ದಾಗ ಅದು ಪ್ರಭುಪ್ರೇಮಕ್ಕೆ ವಿರೋಧಿಯಾಗಿತ್ತು ಅಂತೇ ಅದು ತ್ಯಾಜ್ಯ.

೧೯–೫–೩೨

**ಬಾಪೂನ ಆಶೀರ್ವಾದ.**

**೩೫**

ನೀನು ಮೂರ್ಖಳೆಂದೇ ಹೇಳಬೇಕು. ಹುಡುಗರಿಗೆ ಪ್ರಶ್ನೆ ಕೇಳುವುದೇ ಬೇಡಾಗಿದ್ದರೆ ಅದಕ್ಕೆ ಉತ್ತರ ಬರೆಯುವುದು ಕಾಲದದುರ್ವ್ಯಯ. ರುಚಿಯಾಗುವಂತೆ ಬರೆದರೆ ಪರವಾಯಿಲ್ಲ. ಹುಡುಗರಿಗೆ ತಂದೆತಾಯಿಯ ಕಾಗದ ಬರಬೇಕೆಂಬ ಆಸೆಯಿರದಿದ್ದರೂ ಕಾಗದ ಬಂದರೆ ಮಾತ್ರ ಸಂತೋಷ ಆಗಿಯೇ ಆಗುತ್ತದೆ. ಅದರಲ್ಲಿ ಸ್ವಾರ್ಥ ಎಳ್ಳಷ್ಟೂ ಇಲ್ಲ.

ಸಾಕಾರ ಮೂರ್ತಿಯ ಪ್ರಾರ್ಥನೆಯನ್ನು ನಾನು ನಿಷೇಧಿಸಿಲ್ಲ. ನಿರಾಕಾರ ಪ್ರಾರ್ಥನೆಗೆ ಮೇಲಿನ ಸ್ಥಾನ ಕೊಟ್ಟೆ. ಹೀಗೆ ಭೇದ ಮಾಡುವುದೂ ಸರಿಯಿರಲಾರದೇನೊ. ಒಬ್ಬೊಬ್ಬರಿಗೊಂದೊಂದು ರುಚಿ. ಅದರಲ್ಲಿ ಹೋಲಿಕೆಗೆ ಎಡೆಯಿಲ್ಲ. ನನ್ನ ಕಣ್ಣಿಗೆ ನಿರಾಕಾರ ಸರಿ ಎನಿಸುತ್ತದೆ. ಶಂಕರ ರಾಮಾನುಜರ ಬಗ್ಗೆ ನೀನು ಬರೆದ ಪೃಥಕ್ಕರಣ ಸರಿಯಾಗಿಲ್ಲ. ಪರಿಸ್ಥಿತಿಗಿಂತ ಅನುಭವದ ಪ್ರಭಾವವೇ ಹೆಚ್ಚಿನದು. ಸತ್ಯದ ಪೂಜಾರಿಯ ಮೇಲೆ ಪರಿಸ್ಥಿತಿಯ ಪ್ರಭಾವ ಬೀಳಬಾರದು. ಪರಿಸ್ಥಿತಿಯನ್ನು ಭೇದಿಸಿಕೊಂಡು ಮುಂದೆ ನುಗ್ಗಿ ಹೋಗುವುದೇ ಅವನ ಕೆಲಸ. ಪರಿಸ್ಥಿತಿಯ ಪರಿಣಾಮದಿಂದ ಹುಟ್ಟಿದ ಮತಗಳಲ್ಲಿ ತಪ್ಪು ಇರುವ ಸಂಭವವಿದೆ. ಇದರ ಪ್ರಸಿದ್ಧ ನಿದರ್ಶನ—ಆತ್ಮ, ದೇಹ. ದೇಹದ ನಿಕಟ ಸಂಬಂಧವಿರುವುದರಿಂದ ಆತ್ಮ ಬೇರೆಯಾಗಿ ಕಾಣದು. ಈ ಪರಿಸ್ಥಿತಿಯನ್ನು ಭೇದಿಸಿ "ನೇತಿ ನೇತಿ" ಎಂದು ಹೇಳಿದವರ ಶಕ್ತಿಗೆ ಸರಿತೂಗಿದವರು ಇದು ವರೆಗೆ ಯಾರೂ ಇಲ್ಲ. ಇಂಥ ಉದಾಹರಣೆ ಬೇಕಾದಷ್ಟು ಸುಲಭವಾಗಿಯೇ ಕಾಣುತ್ತದೆ. ತುಕಾರಾಮ ಮೊದಲಾದ ಸಂತರ ವಚನಗಳಿಗೆ

ಶಬ್ದಾರ್ಥ ಮಾಡುವದು ಸ್ವಲ್ಪವೂ ಯೋಗ್ಯವಲ್ಲ. ಅವರ ವಚನವೊಂದನ್ನು ನಾನು ಮೊನ್ನೆಯೆ ಓದಿದೆ. ಅದನ್ನು ಇಲ್ಲಿ ಉದಾಹರಿಸುತ್ತೇನೆ ನಿನಗಾಗಿ.

† ಕೇಲಾ ಮಾತೀಚಾ ಪಶುಪತಿ, ಪರಿ ಮಾತೀಸಿ ಕಾಯ್ ಮಹತೀ?
ಶಿವಪೂಜಾ ಶಿವಾಸಿ ಪಾವೇ, ಮಾತೀ ಮಾತೀ ಮಾಜೇ ಸಾಮಾವೇ
ಕೇಲಾ ಪಾಷಾಣಾಚಾ ವಿಷ್ಣು, ಪರಿ ಪಾಷಾಣನವ್ಹೆ ವಿಷ್ಣು
ವಿಷ್ಣುಪೂಜಾ ವಿಷ್ಣುಸಿ ಅರ್ಪೆ, ಪಾಷಾಣರಾಹೇ
ಪಾಷಾಣರೂಪೇ—ಇತ್ಯಾದಿ.

ಇದರಿಂದ ನನಗೆ ಹೊಳೆಯುವುದು ಇಷ್ಟು ಇಂಥ ಸಂತರ ಅನುಭವದ ಭಾಷೆಯ ಹಿಂಬದಿಗೆ ಇರುವ ಭಾವವೇನೆಂಬದನ್ನು ತಿಳಿದುಕೊಳ್ಳಬೇಕು. ಅವರು ರಚಿಸುವುದೇನೋ ಸಾಕಾರ ಚಿತ್ರ; ಭಜಿಸುವುದು ಮಾತ್ರ ನಿರಾಕಾರ ಭಗವಂತನನ್ನು. ನಾವು ಪ್ರಾಕೃತರು. ಅದನ್ನು ಮಾಡಲಾರೆವು. ಅಂತಲೇ ಅದರ ರಹಸ್ಯ ತಿಳಿಯದೆ ನಡೆದರೆ ಸಾವಿನ ಬೆನ್ನು ಹತ್ತಿದಂತೆ.

ಉರ್ದೂ ಓದಬಲ್ಲವರು ಯಾರಾದರೂ ಇಮಾಂಸಾಹೇಬರ ಮನೆಗೆ ಹೋದರೆ ಆ ಪುಸ್ತಕ ಕೂಡಲೆ ಸಿಗುತ್ತವೆ. ಅಲ್ಲಿ ಮೀರಾಬೇನಳ ಇಂಗ್ಲೀಷು—ಉರ್ದು, ಉರ್ದು-ಇಂಗ್ಲೀಷು ನಿಘಂಟು ಇವೆ; ಎರಡನ್ನೂ ಕಳಿಸು.

ಇಮಾಂಸಾಹೇಬರ ಮನೆ ಯಾವಾಗಲಾದರೂ ಗುಡಿಸುತ್ತೀರೋ ಇಲ್ಲವೋ ? ವಾಸವಿಲ್ಲದ ಮನೆ ವಾರಕ್ಕೊಮ್ಮೆ ಹದಿನೈದು ದಿನಕ್ಕೊಮ್ಮೆ ಚೊಕ್ಕಟಮಾಡಬೇಕು.

ದಿನಚರಿ ಬರೆವರೂಢಿಯಿಲ್ಲದವರಿಗೆ ತಮ್ಮ ಕಾಲದ ಲೆಕ್ಕ ಬರೆಯುವುದು ಕಷ್ಟವಾದೀತು. ರೂಢಿಯಾದರೆ ಅದಕ್ಕೆ ಬಹಳ ಹೊತ್ತು

† ಮಣ್ಣೊಳಗೆ ಪಶುಪತಿಯು ಮಾಡಿದರೆ ಮಣ್ಣಗೇನು ಮಹತ್ತು ? ಶಿವನಿಗೆ ಪೂಜೆ, ಮಣ್ಣಗೆ ಮಣ್ಣೇ. ಕಲ್ಲಿನಲಿ ಹರಿಯ ಮಾಡಿದರೆ ಕಲ್ಲೇ ಹರಿಯಾದೀತೇ ? ಹರಿಪೂಜೆ ಹರಿಗೇ, ಕಲ್ಲು ಕಲ್ಲೇ.

ಹಿಡಿಯದು. ಮಾಡುವುದನ್ನೆಲ್ಲ ತಿಳಿದು ಮಾಡಿದರೆ ಅದಕ್ಕೆ ಶೋಭೆ, ಸಾಫಲ್ಯ ಉಂಟು.

ದಕ್ಷಿಣ ಆಫ್ರಿಕೆಯ ಹುಡುಗರ ಉದಾಹರಣೆ ಕೊಟ್ಟರೆ ಇಲ್ಲಿಯ ಹುಡುಗರನ್ನು ಹಳಿಯಲೆಂದಲ್ಲ; ಪ್ರೋತ್ಸಾಹನ ಕೊಡಲಿಕ್ಕೆಂದು. ಇಲ್ಲಿರುವವರೂ ಕೆಲಸಮಾಡಬಲ್ಲರು. ಯಾರಾದರೂ ಅವರಿಂದ ಕೆಲಸ ಮಾಡಿಸುವವರು ಇರಬೇಕಲ್ಲ. ನೀನೇ ಇದ್ದೀಯೇ.

ಸೊಂಟದ ನೋವಿಗಾಗಿ ಬಿಸಿನೀರಿನಲ್ಲಿ ಕೂತುಕೋ; ೧೫ರಿಂದ ೩೦ ನಿಮಿಷ ಕೂಡಬೇಕು; ಕೂತು ಸೊಂಟವನ್ನು ನೀವಿಕೊಳ್ಳಬೇಕು. ಹಾಗೆ ಮಾಡಿದರೆ ನೋವು ಕಡಮೆಯಾದೀತು. ಮಾಸಿಕಧರ್ಮದ ಮೇಲೂ ಒಳ್ಳೇ ಪರಿಣಾಮವಾದೀತು. ಡಾಕ್ಟರರೇನು ಹೇಳುತ್ತಾರೋ ಬರೆ. ಇಂಥ ವ್ಯಾಧಿಗೆ ಮೊಳಕೆಯಾಗಿದ್ದಾಗಲೇ ಚಿಕಿತ್ಸೆಯಾಗಬೇಕು.

ನಿನ್ನ ಕೆಲಸದ ಪಟ್ಟಿ ನೋಡಿದೆ. ಬಹಳ ಹೆಚ್ಚು. ಎಷ್ಟೋ ಬಿಟ್ಟು ಬಿಡಬಹುದು. ೧೨-೩೦ರಿಂದ ೫-೪೦ರತನಕ ಉದ್ಯೋಗ ತರಗತಿ ಇದೆ; ಅಂದರೆ ೫ ಗಂಟೆ ೧೦ ನಿಮಿಷ. ಇದರಲ್ಲಿ ೧ ಗಂಟೆಯ ಹೊತ್ತು ಕಡಮೆ ಮಾಡಿ ವಿಶ್ರಾಂತಿ ತೆಗೆದುಕೊಳ್ಳಬಹುದು. ಆ ಹೊತ್ತಿನಲ್ಲಿ ಒಬ್ಬಳೇ ಏಕಾಂತವಾಗಿ ಮಲಗಬೇಕೆನಿಸಿದರೆ ಮಲಗು, ನಿದ್ದೆ ಮಾಡಿದರೂ ಸರಿ. ನಿನಗೆ ಹಾಯಿ ಎನಿಸಿದ್ದನ್ನು ಮಾಡು. ಆದರೆ ಹರಟೆಗೋ ಇನ್ನೇನಾದರೂ ಕೆಲಸ ಮಾಡಲಿಕ್ಕೋ ಹೋಗಕೂಡದು. ಆ ಸಮಯದಲ್ಲಿ ವಿಶ್ರಾಂತಿ ತೆಗೆದುಕೊಳ್ಳುವುದು ಸಾಧ್ಯವಾಗದಿದ್ದರೆ ಆ ಮೇಲೆ ಮಾಡಬೇಕಾದ ಕೆಲಸ ಆಗ ಮಾಡಿ, ಸಂಜೆಗೆ ವಿಶ್ರಾಂತಿ ತೆಗೆದುಕೋ.

ತನ್ನ ಕೆಲಸದಲ್ಲಿ ತನ್ಮಯನಾದವನಿಗೆ ಕೆಲಸ ಭಾರ ಎನಿಸುವುದೂ ಇಲ್ಲ, ಅದರಿಂದ ಅವನಿಗೆ ಆಯಾಸವೂ ಇಲ್ಲ. ಕೆಲಸದಲ್ಲಿ ರುಚಿ ಇಲ್ಲದವರಿಗೆ ಸ್ವಲ್ಪ ಕೆಲಸವಾದರೂ ಗುಡ್ಡದಷ್ಟು. ಕೈದಿಗೆ ಒಂದುದಿನ ಒಂದು ವರ್ಷ; ಭೋಗಿಗೆ ಒಂದು ವರ್ಷ ಒಂದು ದಿನ.

ಮೊದಲು ಯುರೋಪು ಸಂಗೀತ ಕೇಳಿದಾಗ ಬೇಸರವಾಗುತ್ತಿತ್ತು ಈಗೀಗ ಏನೋ ಕೊಂಚ ಅರ್ಥವಾಗುತ್ತಿದೆ, ರುಚಿಯೂ ಹುಟ್ಟಿದೆ.

"ಏನಾದರೂ ಓದಬೇಕೆಂಬಾಸೆ ಇಟ್ಟುಕೊಂಡರೆ ಇಲ್ಲಿ ಸಾಧ್ಯವಿಲ್ಲ" ಎಂದು ನೀನು ಬರೆದಿದ್ದಿಯೆ. ಹೆಚ್ಚಾಗಿ ಓದಲು ಸಾಧ್ಯವಿಲ್ಲ, ನಿಜ. ಇದು ಗೌಣ; ಇದೂ ನಿಜ. ಆದರೂ ಆಶ್ರಮವಾಸಿಗಳನೇಕರು ಬೇಕಾದಷ್ಟು ಓದಿದಾರೆ. ನಿನ್ನ ನಿರಾಶೆಯ ಮಾತು ನನಗೆ ರುಚಿಸಲಿಲ್ಲ. ಎಲ್ಲಿ ಅಪೂರ್ಣತೆ ಇದೆ ಅನಿಸುತ್ತದೆಯೋ ಅಲ್ಲಿ ಪೂರ್ಣತೆ ತರಲು ಪ್ರಯತ್ನ ಮಾಡಬೇಕು. ಕಡೆಗೂ ಅಪೂರ್ಣವೇ ಇದ್ದರೆ, ಆಯವ್ಯಯವೆಲ್ಲ ಲೆಕ್ಕ ಮಾಡಿ ನೋಡಿದಾಗ ದೋಷವೇ ಉಳಿದರೆ ಅದನ್ನು ಬಿಡುವುದೇ ಒಳಿತು. ಅದರಿಂದ ನಮಗೂ ಹಿತ, ಸಮಾಜಕ್ಕೂ ಹಿತ ಆದೀತು.

ಉದ್ದುದ್ದ ಪತ್ರ ಬರೆದೆಯೆಂದು ಕ್ಷಮೆ ಬೇಡುವ ಅಗತ್ಯವಿಲ್ಲ. ನನಗೇನೂ ಅದರಿಂದ ಬೇಸರವಾಗದು. ಆಯಾ ಕಾಲಕ್ಕೆ ನಿನ್ನ ಹೃದಯದಲ್ಲಿ ಮೂಡಿದ ಭಾವಗಳ ಕನ್ನಡಿ ಅವು. ಅದರಿಂದ ನಾನು ಕಲಿತುಕೊಳ್ಳುತ್ತೇನೆ.

ಬಾರ್ಡೋಲಿ, ೧೭-೬-೩೨

ಬಾಪೂನ ಆಶೀರ್ವಾದ.

೩೬

ನಿನ್ನ ಕಾಗದ ದೊಡ್ಡದು ಎಂದು ನನಗೇನನಿಸಲಿಲ್ಲ. ನನಗೇನು ಬೇಕೋ ಆ ವಿವರವೆಲ್ಲ ನೀನು ಬರೆದಿದ್ದೀಯೆ. ಸಿಂಹಗಡಕ್ಕೆ ನಾನು ಮೂರು ಸಲ ಹೋಗಿದ್ದೆ. ಒಂದು ಸಲ ಹೋದಾಗ ಲೋಕಮಾನ್ಯರಿನ್ನೂ ಇದ್ದರು. ಆಗ ಅವರ ಸಹವಾಸ ಬೇಕಾದಷ್ಟು ಸಿಕ್ಕಿತ್ತು. ಅವರ ಮನೆ ನೋಡಿದೆ. ಹರಿನಾರಾಯಣ ಆಪಟೆಯನ್ನೂ ಕಂಡಿದ್ದೆ. ಅವರ ಕಾದಂಬರಿ ಓದಬೇಕೆಂದು ಬಹಳ ಮನಸ್ಸಿದೆ. ಆದರೆ, ಸದ್ಯ ಹೊಸದೇನೂ ಕೈಗೆ ತೆಗೆದುಕೊಳ್ಳುವ ಹಾಗಿಲ್ಲ; ಉರ್ದು, ಅರ್ಥಶಾಸ್ತ್ರ, ಆಕಾಶದರ್ಶನ, ಚರಖಾ, ಪತ್ರವ್ಯವಹಾರ-ಇಷ್ಟು ಸಾಕು ಸದ್ಯ. ನಡುನಡುವೆ ಏನಾದರೂ ಓದಬೇಕಾಗಿ ಬಂದೇಬರುತ್ತದೆ.

ಸುಪರಿಂಟೆಂಡೆಂಟರ ವಿಷಯವಾಗಿ ನೀನು ಬರೆದದ್ದು ಸರಿ. ನಾನು ಎಲ್ಲವನ್ನೂ ನೋಡಿ ತಿಳಿದುಕೊಂಡಿದ್ದೆ. ಇದನ್ನೆಲ್ಲ ಸ್ಮರಿಸಬೇಕು.

ಮನುಷ್ಯ ಕೆಟ್ಟವನೇನಲ್ಲ. ಅಧಿಕಾರ ಎನ್ನುವದು ಬಹಳ ಕೆಟ್ಟದು. ಅದೂ ಎಂಥ ಅಧಿಕಾರ? ನಮ್ಮ ಲೆಕ್ಕ ಹೀಗಿರಬೇಕು; ಕೆಟ್ಟ ಸ್ಥಿತಿಯಲ್ಲೂ ಕೂಡ ಅವನು ಸ್ವಲ್ಪ ದಯೆದಾಕ್ಷಿಣ್ಯ ಇಟ್ಟುಕೊಂಡಿದಾನಲ್ಲ. ನಾವೇ ಆ ಸ್ಥಾನದಲ್ಲಿದ್ದರೆ ಎಷ್ಟು ಕೆಳಗಿಳಿಯುತ್ತಿದ್ದೆವೋ ಏನೋ. ಇಂಥ ಅನುಭವ ಇನ್ನೂ ಬಹಳ ಬಂದಾವು ಇಂಥ ಅನುಭವದಿಂದಲೇ ಸಹನಶಕ್ತಿ, ಉದಾರತೆ, ದೃಢಪ್ರಯತ್ನ, ವಿವೇಕ ಕಲಿಯಬೇಕು. ಎಲ್ಲ ಅನುಕೂಲವೂ ಇದ್ದರೆ ಒಳ್ಳೆಯವರೆನಿಸಿಕೊಳ್ಳಲು ಎಲ್ಲರೂ ಪ್ರಯತ್ನ ಮಾಡುತ್ತಾರೆ.

ಸ್ತ್ರೀ ಪುರುಷರ ಬಗ್ಗೆ ಬರೆಯಬೇಕೆನಿಸಿತ್ತು. ಆದರೆ ನೀನೇ ಆ ಬಗ್ಗೆ ಪ್ರಶ್ನೆ ಬರೆದರೆ ಅನುಕೂಲ.

ಇಂಗ್ಲಿಷ ಕಲಿಸುವುದನ್ನು ನಿಲ್ಲಿಸಬೇಡಿರಿ. ಹೊಸದಾಗಿ ಕಲಿಸಬೇಕಾದರೆ ಅದಕ್ಕೆ ಪೂರ್ವ ಇಷ್ಟು ಶಿಕ್ಷಣವಾಗಿರದೆ ಕಲಿಸಬೇಡಿರಿ.

ತಾಮ್ರಕ್ಕಿಂತ ಗಟ್ಟಿಯಾಗಬೇಕು ನಿನ್ನ ಮೈ. ಮೀನು ತಿನ್ನಬಾರದು ಎನ್ನುವದನ್ನು ನೀನು ಒಪ್ಪದಿದ್ದರೆ, ತಿಂದರೆ ಮೈಗೊಳ್ಳೆಯದು ಎಂದು ನಿನಗನಿಸುತ್ತಿದ್ದರೆ, ಹೊರಗೆ ಹೋಗಿ ತಿಂದುಬರಬಹುದು. ಇಮಾಂಸಾಹೇಬರು ಹೀಗೇ ಮಾಡುತ್ತಿದ್ದರು. ಈ ವಿಷಯವಾಗಿ ಹೆಚ್ಚು ಚರ್ಚೆ ಬೇಕಾಗಿದ್ದರೆ ಮಾಡು.

ಯರವಡಾ ಮಂದಿರ, ೨೦–೬–೩೨

ಬಾಪೂನ ಆಶೀರ್ವಾದ.

## ೩೭

ಉರ್ದು ಪುಸ್ತಕದಲ್ಲಿ ನದವಿಯವು ಎರಡುಭಾಗ. ಷಿಬ್ಲಿಯ ಬದಲು ನದವಿ ಬರೆದಿದಾನೆ. ಪುಸ್ತಕದ ಮೇಲೆ ಸುಲೇಮನ್ ನದವಿಯೆಂದು ಬರೆದಿರಬಹುದು.

ಮೀನು ತಿನ್ನುವುದರಲ್ಲಿ ನೀನು ಅಪವಾದ ಎಂದು ನಾನೆನಿಸಿಲ್ಲ. ಕಾಡ್‌ಲಿವರ್ ಎಣ್ಣೆ ನಿಷಿದ್ಧ; ಆದರೂ ಆಶ್ರಮದಲ್ಲಿ ಬಳಸಲು ಒಪ್ಪಿಗೆ ಕೊಟ್ಟಿದೇನೆ. ಆಶ್ರಮವಾದ್ದರಿಂದ ಮೀನು, ಮಾಂಸ ನಿಷೇಧಿಸಲಾಗಿದೆ.

ಈ ನಿರ್ಬಂಧ ಆಶ್ರಮಕ್ಕೆ, ವ್ಯಕ್ತಿಗಲ್ಲ. ಅಂತೇ ಇಮಾಂಸಾಹೇಬರು ಹೊರಗೆ ಹೋಗಿ ತಿಂದುಬರುತ್ತಿದ್ದರು. ನಿನ್ನ ಬದಲು ನಾರಾಯಣ ದಾಸನನ್ನು ತೆಗೆದುಕೊಳ್ಳೋಣ. ಅವನು ಜನ್ಮದಲ್ಲೆಂದೂ ಮಾಂಸ ತಿಂದವನೇ ಅಲ್ಲ. ಅವನಿಗೇನಾದರೂ ಭೀಕರರೋಗ ಬಂದು, ಮಾಂಸ ತಿಂದರೆ ನಾನು ಬದುಕುತ್ತೇನೆ ಅನಿಸಿದರೆ, ಅವನಿಗೆ ನಾನು ಸ್ವಲ್ಪವೂ ಅಡ್ಡಿ ಮಾಡುವುದಿಲ್ಲ. ನನ್ನ ವಿಚಾರ ಅವನಿಗೆ ಗೊತ್ತಿದೆ. ಧರ್ಮವನ್ನೂ ಬಲ್ಲ. ಆದರೂ ಸಾವಿನ ಸಂದರ್ಭ ಪ್ರತ್ಯೇಕವಾದದ್ದು. ಆ ಹೊತ್ತಿಗೆ ಅವರು ಹಾಗೆ ಇಷ್ಟಪಟ್ಟರೆ ಅವರಿಗೆ ತೊಂದರೆಯಾಗದಂತೆ ನಡೆಯು ವುದು ಸನ್ನಧರ್ಮ. ಇದಕ್ಕೆ ಪ್ರತಿಯಾಗಿ ಇನ್ನೊಂದು ಉದಾಹರಣೆ ನೋಡೋಣ. ಒಬ್ಬ ಹುಡುಗನ ವಿಷಯದಲ್ಲಿ ನಾನೇ ನಿರ್ಧಾರ ಮಾಡು ವವ ಅನ್ನೋಣ. ಅವನು ಸತ್ತರೂ ನನಗೆ ಅಡ್ಡಿಯಿಲ್ಲ, ಆದರೆ ಕೈಯಾರೆ ಕೊಲ್ಲಲಾರೆ. ನಿನಗೆ ಗೊತ್ತಿರಬೇಕು, ಇಂಥದೊಂದು ಸಂದರ್ಭ ಬಾ ಗೆ ಬಂದಿತ್ತು. ಬಹುಶಃ ನನ್ನ ಆತ್ಮಕಥೆಯಲ್ಲಿ ಇದು ಬಂದಿರಬೇಕು. ನಿನಗೆ ಗೊತ್ತಿರದಿದ್ದರೆ, ಅಲ್ಲಿ ಇನ್ನಾರಾದರೂ ತಿಳಿದವರಿರದಿದ್ದರೆ ನನಗೆ ಬರೆ; ನಾನು ಬರೆದು ತಿಳಿಸುತ್ತೇನೆ. ಅದು ನನಗೂ, ಬಾ ಗೂ-ಇಬ್ಬರಿಗೂ ಪುಣ್ಯಪ್ರಸಂಗ. ಈಗ ತಿಳಿಯಿತೇ ? ನೀನು ಮೀನು ತಿನ್ನಬೇಕೆಂದು ನಾನು ಬಲವಂತಮಾಡೆ. ಮೀನಿಲ್ಲದೆ ನಿನಗೆ ಸಾವುಬರುವುದಾದರೆ, ಹಾಗೆ ಸಾಯಲು ನೀನೊಪ್ಪಿದರೆ ನೀನು ಸಾಯಲಿಕ್ಕೂ ನನ್ನ ಒಪ್ಪಿಗೆ. ಆದರೆ ಮೀನು ತಿಂದು ಬದುಕಿದರೂ ಮತ್ತೆ ಸಾಯಲಿಕ್ಕೇತಾನೆ ? ನಂಬಿ ನಡೆ ದರೆ ಅವನಿಗೆ ಅದೇ ಧರ್ಮ. ನನ್ನ ವಿಷಯದಲ್ಲೇ ಹಾಲಿನ ಬಗ್ಗೆ ನಾನೀಧರ್ಮವನ್ನು ಪಾಲಿಸಿಲ್ಲವಲ್ಲ. ಪಶುಕ್ಷೀರವನ್ನು ಬಿಡಬೇಕೆಂಬ ನಿಯಮ ಯಾವಾಗಲೂ ನನ್ನ ಕಣ್ಣೆದುರಿಗೆ ದೀಪದಂತೆ ಕಾಣುತ್ತವೆ. ಆದರೆ ಇಂಥ ಧರ್ಮ ನಾವೇ ನಡಸುವ ಧರ್ಮ; ಪರರನ್ನು ನಡಸಿರೆಂದು ಹೇಳುವ ಧರ್ಮವಲ್ಲ. ಇತಿ.

ಹೆಣ್ಣುಗಂಡಿನ ವಿಷಯ ನೀನು ಕೇಳಿದ್ದು ಸರಿ. ಹುಡುಗರಿಗೆ ಕುತೂಹಲವೆನಿಸಿದ ಸಂಗತಿ ನಮಗೆ ಗೊತ್ತಿದ್ದರೆ ಅವರಿಗೆ ತಿಳಿಸಬೇಕು.

ಗೊತ್ತಿರದಿದ್ದರೆ ಇಲ್ಲವೆಂದು ಒಪ್ಪಿಕೊಳ್ಳಬೇಕು. ಹೇಳುವಂಥದಲ್ಲದಿದ್ದರೆ ಹೇಳಬಾರದು. ಇಂಥ ವಿಷಯ ಯಾರನ್ನೂ ಕೇಳಬಾರದೆಂದು ಹೇಳಬೇಕು. ಆದರೆ ಏನೂ ಹೇಳದೆ ಹಾರಿಸಬಾರದು. ನನಗನಿಸಿದ್ದಕ್ಕಿಂತ ಹುಡುಗರಿಗೆ ಇಂಥ ವಿಷಯ ಹೆಚ್ಚು ಗೊತ್ತಿರುತ್ತದೆ. ಅವರಿಗೆ ತಿಳಿಯುದುದನ್ನು ನಾವು ತಿಳಿಸದಿದ್ದರೆ ಅವರು ಬೇರೆ ಬೇರೆ ಕೆಟ್ಟದಾರಿಯಿಂದ ಅವನ್ನು ಕಲಿತಾರು. ಹೀಗಿದ್ದರೂ ಹೇಳಬಾರದ ವಿಷಯ ಅಲ್ಲಸಲ್ಲದ ಧೈರ್ಯಮಾಡಿ ಹೇಳಬಾರದು. ಇಂಥ ವಿಷಯವೂ ಬಹಳ ಕಡಮೆಯೇ. ಭೀಭತ್ಸಕ್ರಿಯೆಯ ವಿಷಯ ಅವರು ಕೇಳಿದರೂ ಹೇಳಬಾರದು. ಅವರು ಅಡ್ಡಹಾದಿಯಿಂದ ಆ ಜ್ಞಾನಪಡೆದರೂ ಅಡ್ಡಿಯಿಲ್ಲ.

ಹಕ್ಕಿಗಳಲ್ಲಿ ನಡೆಯುವ ಕ್ರಿಯೆಯನ್ನು ನೋಡಿ ಹುಡುಗರು ಕೌತುಕಗೊಂಡು ಕೇಳುತ್ತಾರೆ ಅನ್ನೋಣ, ಆಗ ಅವರ ಕುತೂಹಲವನ್ನು ಪೂರ್ಣಮಾಡುತ್ತೇನೆ. ಅದರಲ್ಲೇ ಬ್ರಹ್ಮಚರ್ಯದ ಪಾಠ ಕಲಿಸುತ್ತೇನೆ. ಪಶುಪಕ್ಷಿಮಾನವರಲ್ಲಿರುವ ಭೇದವನ್ನೂ ತಿಳಿಸುತ್ತೇನೆ. ಅದರ ಹಾಗೆ ನಡೆವ ಗಂಡುಹೆಣ್ಣು ಮನುಷ್ಯಾಕಾರದ ಪಶುಪಕ್ಷಿಯೇ ಸರಿ. ಇದು ನಿಂದೆಯಲ್ಲ; ನಿಜವಾದ ಮಾತು. ಪಶುತ್ವದಿಂದ ಮುಕ್ತರಾಗಲೆಂದೇ ಮನುಷ್ಯಾಕಾರ, ಬುದ್ಧಿ ದೊರೆತಿವೆ.

ವಯಸಿಗೆ ಬಂದ ಹುಡುಗಿಯರಿಗೆ ಮಾಸಿಕಧರ್ಮದ ಜ್ಞಾನವನ್ನು ಮಾಡಿಕೊಡಬೇಕು. ಚಿಕ್ಕಹುಡುಗಿಯರೇನಾದರೂ ಕೇಳಿದರೆ ಅವರ ತಿಳಿವಿಗೆ ತಕ್ಕಷ್ಟು ಹೇಳಬೇಕು.

ಎಷ್ಟೇ ಪ್ರಯತ್ನಮಾಡಿದರೂ ಹುಡುಗ ಹುಡುಗಿಯರಿಗೆ ಇದು ಕೊನೆಯ ತನಕ ತಿಳಿಯದಂತೆ ಮಾಡುವುದು ಅಶಕ್ಯ. ಅಂತೇ ಯೋಗ್ಯ ಕಾಲಕ್ಕೆ ಅವರಿಗೆ ಆ ತಿಳುವಳಿಕೆ ಕೊಡುವುದು ಅಗತ್ಯ. ಈ ತಿಳುವಳಿಕೆಯಿಂದ ಬ್ರಹ್ಮಚರ್ಯ ಪಾಲನೆ ಮಾಡಲಾರದಂತಾಗುವವರ ನಿರ್ಬಲ ಬ್ರಹ್ಮಚರ್ಯ ನನಗೆ ಉಪಯೋಗವಿಲ್ಲ. ಈ ಜ್ಞಾನದಿಂದ ಬ್ರಹ್ಮಚರ್ಯ ಮತ್ತಷ್ಟು ದೃಢವಾಗಬೇಕು. ನನ್ನ ವಿಷಯದಲ್ಲಿ ಹೀಗೇ ಆಯಿತು.

ಜ್ಞಾನದಾನ–ಗ್ರಹಣದಲ್ಲಿ ಎಷ್ಟೋ ರೀತಿಯಿದೆ. ವಿಕಾರ ಬೆಳೆಸಲಿಕ್ಕೆ ಒಬ್ಬ ಅದನ್ನೂ ಪಡೆಯುತ್ತಾನೆ. ಒಬ್ಬನಿಗೆ ಅನಾಯಾಸವಾಗಿಯೇ ಸಿಗುತ್ತದೆ. ಮೂರನೆಯವನು ವಿಕಾರಶಮನಕ್ಕಾಗಿ, ಪರಹಿತಕ್ಕಾಗಿ ಜ್ಞಾನಗಳಿಸುತ್ತಾನೆ.

ಅಧಿಕಾರವಿದ್ದವನೇ ಈ ಜ್ಞಾನದಾನ ಮಾಡಬೇಕು. ನೀನು ಅದನ್ನು ಸಾಧಿಸಬೇಕು. ಈ ತಿಳುವಳಿಕೆ ಕೊಡುವುದರಿಂದ ವಿಕಾರವೃದ್ಧಿ ಯಾಗದು ಎಂದು ನಿನಗೆ ಆತ್ಮವಿಶ್ವಾಸವಿದ್ದರೆ ನೀನು ಕಲಿಸು. ವಿಕಾರಶಮನಕ್ಕಾಗಿ ಈ ತಿಳುವಳಿಕೆ ಕೊಡಬಹುದು ಎಂಬ ಅರಿವು ನಿನಗಿರಬೇಕು. ಆದರೆ ಈ ಸಂದರ್ಭದಲ್ಲಿ ನಿನ್ನಲ್ಲಿ ಯಾವ ತರದ ವಿಕಾರವೂ ಆಗಬಾರದೆಂಬುದು ತಿಳಿದಿರಲಿ.

ಹೆಣ್ಣುಗಂಡಿನ ದಾಂಪತ್ಯಕ್ಕೆ ಅಡಿಗಲ್ಲು ಭೋಗ. ಅದರೊಳಗಿಂದ ತ್ಯಾಗವನ್ನು ಅರಳಿಸುವ ಪ್ರಯತ್ನವನ್ನು ಹಿಂದೂ ಧರ್ಮ ಮಾಡಿದೆ. ಎಲ್ಲ ಧರ್ಮಗಳೂ ಆ ಪ್ರಯತ್ನ ಮಾಡಿವೆ. ಗಂಡ, ಬ್ರಹ್ಮವಿಷ್ಣು ಮಹೇಶ್ವರನಾದರೆ ಹೆಂಡತಿಯೂ ಅಷ್ಟೆ. ಹೆಂಡತಿ ದಾಸಿಯಲ್ಲ; ಸಮಾನಾಧಿಕಾರವುಳ್ಳ ಗೆಳತಿ, ಸಹಚಾರಿಣಿ. ಇಬ್ಬರೂ ಪರಸ್ಪರ ಗುರುಗಳು. ಹುಡುಗಿಗೂ ಹುಡುಗನಿಗಿದ್ದಂತೆ ಸಮಾನಭಾಗವಿರಬೇಕು. ಇಬ್ಬರಲ್ಲಿ ಯಾರಿಗೇ ಸಂಪತ್ತು ಸಿಕ್ಕರೂ ಇಬ್ಬರೂ ಅದಕ್ಕೆ ಸಮಾನಾಧಿಕಾರಿಗಳು. ಹೆಂಡತಿಯ ಸಹಾಯದಿಂದಲೇ ಗಂಡ ಗಳಿಸುತ್ತಾನೆ; ಬರೀ ಅಡಿಗೆ ಮಾಡುವುದಷ್ಟೇ ಆದರೂ ಕೂಡ. ಆಕೆ ದಾಸಿಯಲ್ಲ, ಪಾಲುಗಾರ್ತಿ.

ಗಂಡ ಅನ್ಯಾಯ ಮಾಡಿದರೆ ಹೆಂಡತಿ ಅವನನ್ನು ತೊರೆದು ಬೇರೆ ಆಗಬಹುದು. ಆಕೆಗೆ ಅಧಿಕಾರವುಂಟು.

ಮಕ್ಕಳ ಮೇಲೆ ಇಬ್ಬರಿಗೂ ಸಮಾನಾಧಿಕಾರ. ದೊಡ್ಡವರಾದ ಮೇಲೆ ಅವರ ಮೇಲೆ ಯಾರ ಅಧಿಕಾರವೂ ಇಲ್ಲ. ಹೆಂಡತಿ ಅಯೋಗ್ಯಳಾದರೆ ಆಕೆಗೆ ಅಧಿಕಾರವಿಲ್ಲ. ಗಂಡನಿಗೂ ಅಷ್ಟೆ.

ಸಂಗ್ರಹವಾಗಿ ಹೇಳಬೇಕೆಂದರೆ, ನಮಗೆ ಪ್ರತ್ಯಕ್ಷವಾಗಿ ಕಾಣುವ ನಿಸರ್ಗ ಸಹಜವಾದ ಭೇದವಲ್ಲದೆ ಹೆಣ್ಣುಗಂಡಿನಲ್ಲಿ ನನಗೆ ಬೇರಾವ

ಭೇದವೂ ಇದ್ದಂತೆ ತೋರುವುದಿಲ್ಲ. ......ರಲ್ಲಿ ಅನಾಸಕ್ತಿಯಿಂದ ಕೆಲಸ ಮಾಡುವ ಮಹಾಶಕ್ತಿಯಿದೆ. ಆಸಕ್ತನಿಗಿಂತ ಅನಾಸಕ್ತನಾದವ ಹೆಚ್ಚು ಕೆಲಸ ಮಾಡುತ್ತಾನೆ; ಮತ್ತೆ, ಕೆಲಸವಿಲ್ಲದವನಂತೆಯೆ ಇರುತ್ತಾನೆ. ಎಲ್ಲರೂ ದಣಿದ ಮೇಲೆ ಅವನಿಗೆ ದಣಿವು. ನಿಜವಾಗಿ ನೋಡಿದರೆ, ಅವನಿಗೆ ಯಾವುದೂ ಶ್ರಮವೆನಿಸಬಾರದು. ಅದು ಆದರ್ಶದ ಮಾತು. ನೀನು ಅಲ್ಲಿದ್ದೀಯೆ. ನಿನಗೆ ಅಲ್ಲಿ ಅಶಾಂತಿಯೆನಿಸಿದರೆ, ಆತ್ಮವಂಚನೆ ಯೇನೋ ಅನಿಸಿದರೆ ನಿನ್ನ ಧರ್ಮ ಬೇರೆ, ನನ್ನದು ಬೇರೆ. ......ರಿಗೆ ನೀನು ಬುದ್ಧಿ ಹೇಳಲೇಬೇಕು. ನಾನು ಅಲ್ಲಿದ್ದಿದ್ದರೆ, ಅವನು ತನ್ನ ಮಾತಿನಂತೆ ನಡೆಯದಿದ್ದುದು ಕಣ್ಣಿಗೆ ಬಿದ್ದಾಗ ನಾನೇ ಹೇಳುತ್ತಿದ್ದೆ. ನೀನು ಬುದ್ಧಿ ಹೇಳಿದಾಗ ಅವನು ಇದಿರಾಡಿಯಾನು, ಆಡಿದರೆ ಮೊದಲು ಅದನ್ನು ಕೇಳು; ಅವನು ದಿಟಹೇಳುತ್ತಾನೆಂದು ನಿನಗನಿಸುವ ತನಕ. ಎಷ್ಟೋ ಸಲ ನಮ್ಮ ಕಣ್ಣು ಕೂಡ ನಮಗೆ ಮೋಸಮಾಡುತ್ತದೆ. ನೀನು ಖಿನ್ನಳಾಗಿದ್ದೀ ಎಂದು ನನಗೆ ಕಂಡಿತು ಎನ್ನು. ನೀನು ಇಲ್ಲವೆಂದರೆ ನಾನು ಒಪ್ಪಲೇಬೇಕು ತಾನೆ. ನೀನು ಏನೋ ಮುಚ್ಚಿಡುತ್ತೀಯೆ. ಅನಿಸಿದರೆ ಆ ಮಾತೇ ಬೇರೆ. ಆಗ ನಾನು ನಿನ್ನನ್ನು ಕೇಳುವ ಕಾರಣವೇ ಇಲ್ಲ. ಅದನ್ನು ತಿಳಿದುಕೊಳ್ಳಲು ಬೇರೆ ಸಾಧನ ಹುಡುಕಬೇಕಾದೀತು. ಆದರೆ ಆಶ್ರಮಜೀವನ ಹೀಗೆ ನಡೆಯಲಾರದು. ಅದರ ತಳಹದಿ ಸತ್ಯ. ಸದುದ್ದೇಶದಿಂದಲೇ ಆದರೂ ವಂಚನೆ ಯೋಗ್ಯವಲ್ಲ.

ನಾಲ್ಕನೆ ಜುಲೈ ಇದಿರು ನೋಡು.* ಆದರೆ ಯಾವ ವರ್ಷದ ನಾಲ್ಕನೆ ಜುಲೈಯೋ? ವರ್ಷ ಯಾವುದಾದರೂ ಆಗಲಿ, ತಿಂಗಳು ತಾರೀಖು ಗೊತ್ತಾದವಲ್ಲ; ಇದೇನು ಸಣ್ಣ ಮಾತೇ? ಇದರಿಂದ ಇನ್ನಾವ ತಿಂಗಳೂ ತಾರೀಖೂ ಇದಿರು ನೋಡುವ ಅಗತ್ಯವುಳಿಯಲಿಲ್ಲ. ಈ ಜುಲೈ ೪ ದಾಟಿದರೆ ೧೯೩೩ರ ಜುಲೈ ವರೆಗೆ ಶಾಂತವಾಗಿರಬೇಕು.

೨೩–೬–೩೨

ಬಾಪೂನ ಆಶೀರ್ವಾದ.

* ೪ನೆ ಜುಲೈಗೆ ಗಾಂಧೀಜೀ ಬಂಧಮುಕ್ತರಾಗುತ್ತಾರೆಂದು ಯಾರೋ ಭವಿಷ್ಯ ಹೇಳಿದ್ದರು.

## ೩೮

ನಿನಗೆ ನೂರು ವರ್ಷ ತುಂಬಿತು ಎಂದು ತಿಳಿಯುತ್ತೇನೆ. ನೀನು ಹೇಳುವದು ಸರಿ ಮುಂಬಯಿಯಿಂದ ನಿನ್ನನ್ನು ಜೊತೆಯಲ್ಲಿ ಕರೆದು ಕೊಂಡು ಬಂದಾಗ ನೀನು ಇರುತ್ತೀಯೋ ಇಲ್ಲವೋ ಎಂದು ಸಂಶಯ ವಿತ್ತು. ನೀನು ತಿಳಿದುಕೊಂಡಷ್ಟೇನು ಇರಲಿಲ್ಲ. ನಿನ್ನ ಮಾತಿನಂತೆ ನೀನು ನಿಂತೆ. ಆಡಿದಂತೆ ಮಾಡುವವರ ಬಗ್ಗೆ ನಾನೆಂದೂ ಅನುಮಾನ ಪಡುವುದಿಲ್ಲ. ಆದರೆ ಇಷ್ಟು ದಿನ ಇದ್ದು ಬಿಡುತ್ತೀ ಎಂದು ನನಗೆ ಆಗ ಅನಿಸಿರಲಿಲ್ಲ. ಈ ನೂರು ವರ್ಷ ಕಳೆದಂತೆ ಇಡೀ ಆಯುಷ್ಯವನ್ನೇ ನೀನು ಕಳೆಯಬೇಕು ಎಂದು ನನ್ನ ಆಸೆ. ಕಳೆದಷ್ಟು ದಿನ ಕಳೆಯಲಿ ಎಂದಲ್ಲ; ನಿಶ್ಚಯ ಪೂರ್ವಕವಾಗಿ. ನೀನು ಆಶ್ರಮದವಳು, ಆಶ್ರಮ ನಿನ್ನದು ಎಂದು ದೃಢವಾಗಿ ತಿಳಿದು, ನಂಬಿ ಇರು. ಆದರೆ ನನ್ನ ಒಲ ವಂತನೇನೂ ಇಲ್ಲ. ನನ್ನ ಬಯಕೆಯನ್ನು ಆಡಿತೋರಿಸಿದೆ, ಅಷ್ಟೇ. ಆಶ್ರಮ ನನ್ನದೇ ಎಂದು ನಿನಗನಿಸುವವರೆಗೆ ನೀನು ಇದನ್ನು ನಿರ್ಧರಿ ಸಲಾರೆ.

ನಿನ್ನ ಆಶ್ರಮ ಜನ್ಮದ ವಿಷಯ ಆಯಿತು. ನಿನ್ನ ಎರಡನೇಜನ್ಮ ದಿನಸ ೧೩ನೆ ಜುಲೈ. ಈ ಕಾಗದ ಆರ ಸುಮಾರಿಗೆ ಕೈಗೆ ಬಂದೀತು. ನನ್ನ ಆಶೀರ್ವಾದ ಇದ್ದೇ ಇದೆ. ನಿನ್ನ ಸರ್ವೋಚ್ಚ ಅಭೀಷ್ಟ ಸಫಲ ವಾಗಲಿ. ಆ ದಿಕ್ಕಿನಲ್ಲಿ ನಿನ್ನ ಪ್ರಯತ್ನವಂತೂ ನಡದೇ ಇದೆ. ಅಂತಲೇ ನಾನು ನಿಶ್ಚಿಂತನಾಗಿದ್ದೇನೆ. ಅದಕ್ಕೆ ಆಯುಷ್ಯ ಆರೋಗ್ಯ ಎರಡೂ ಬೇಕು. ಅವೂ ನಿನಗೆ ಸಿಗಲಿ. ಇಚ್ಛಾಸಾಫಲ್ಯ, ಆರೋಗ್ಯ, ಆಯುಷ್ಯ ಇವು ನಿನ್ನ ಮೇಲೆ ನನ್ನ ಮೇಲೆ ಅವಲಂಬಿಸಿಲ್ಲ. ಎಲ್ಲಕ್ಕೂ ಅವನೇ ಹೊಣೆ. ಅವನ ಮನಸಿಗೆ ಬಂದಂತೆ ಮಾಡುತ್ತಾನೆ; ಅವನು ಮಾಡಿ ದ್ದೆಲ್ಲ ಒಳಿತೇ. ೧೩ನೆ ತಾರೀಖಿನ ನಿನ್ನ ಲೆಕ್ಕ ಕಳಿಸು. ಆ ದಿವಸ ಏನು ಸಂಕಲ್ಪ ಮಾಡುತ್ತಿಯೋ ಬರೆ. ಜನ್ಮ ದಿನದಲ್ಲಿ ಏನಾದರೊಂದು ಹೊಸ ಸಂಕಲ್ಪ ಮಾಡಬೇಕೆಂದು ನಾನು ಎಲ್ಲರಿಗೂ ಹೇಳುತ್ತಿರುತ್ತೇನೆ. ಜ್ಯೋತಿಷ ಹೇಳುವವರ ಮಾತನ್ನು ನಂಬಬೇಡ. ಅದರ ವಿಚಾರ ಕೂಡ

ಮಾಡಬೇಡ. ಅವರು ಹೇಳುವದು ನಿಜವೇ ಇದ್ದರೂ ಅದನ್ನು ತಿಳಿದು ಕೊಂಡು ಲಾಭವಿಲ್ಲ; ಹಾನಿಯಂತೂ ಸ್ಪಷ್ಟವಾಗಿದೆ.

ಪೈಗಂಬರನ ಚರಿತ್ರೆ ಎಷ್ಟು ಸಿಗುತ್ತವೋ ಅಷ್ಟು ಉರ್ದು ಪುಸ್ತಕ ಅರಬೆಸಾಹೇಬಾ ೨ಭಾಗ; ಖುಲ್‌ಹಾಯೆ ರಾಷದ್ದೀನ್— ಇಂಗ್ಲಿಷ-ಉರ್ದು ಮತ್ತು ಉರ್ದು-ಇಂಗ್ಲಿಷ ನಿಘಂಟು ಕಳಿಸು.

ಯಾವುದಾದರೊಂದು ಗೊತ್ತಾದ ದಿನ ಮನೆಗಳೆಲ್ಲ ಚೊಕ್ಕಟ ಮಾಡಬೇಕು. ಸಾಮಾನು ತೆಗೆದಿಡಬೇಕು. ಇದಕ್ಕಾಗಿ ತೆರವು ಮಾಡಿ ಕೊಳ್ಳದೆ ಬೇರೆ ಮಾರ್ಗವಿಲ್ಲ.

ವ್ಯಕ್ತಿಯಿರಲಿ, ಸಮಾಜವಿರಲಿ, ಸಂಸ್ಥೆಯಿರಲಿ-ನಮಗೆ ಅಪೂರ್ಣ ವೆನಿಸಿದರೆ ಅಲ್ಲಿ ಪೂರ್ಣತೆ ತರಲು ನಾವು ಪ್ರಯತ್ನ ಮಾಡಬೇಕು. ಇದು ನಮ್ಮ ಧರ್ಮ. ಗುಣಕ್ಕಿಂತ ದೋಷವೇ ಬೆಳೆಯುತ್ತಿದ್ದರೆ ಅದನ್ನು ತ್ಯಾಗ ಮಾಡಬೇಕು, ಅದರೊಂದಿಗೆ ಅಸಹಯೋಗ ಮಾಡಬೇಕು. ಇದು ಶಾಶ್ವತ ಸಿದ್ಧಾಂತ, ಅದನ್ನೇ ನಾನು ಬರೆದಿದ್ದೆ. ನೀನಾಗಲಿ, ಮತ್ತಾರಾದರಾಗಲಿ ಆಶ್ರಮ ಬಿಡಬೇಕೆಂದಲ್ಲ ನಾನು ಹಾಗೆ ಬರೆದುದರ ಉದ್ದೇಶ. ಅಂಥ ಕಾಲದಲ್ಲಿ ಮನುಷ್ಯನ ಧರ್ಮವೇನು ಎಂಬದನ್ನು ಹೇಳಿದೆ ಅಷ್ಟೆ.

ಕಲಕತ್ತೆಯಲ್ಲಿ ದಿನವೂ ನೂರಾರು ಕುರಿಮೇಕೆಯನ್ನು ಬಲಿಕೊ ಡುತ್ತಾರೆ. ಅದನ್ನು ನಿಲ್ಲಿಸುವಂಥ ಯೋಗ್ಯತೆ ನನಗೆ ಬರಲಿ ಎಂದು ದೇವರನ್ನು ದಿನವೂ ಬೇಡುತ್ತೇನೆ. ಇದು ನಿನಗೆ ಗೊತ್ತಿಲ್ಲವೆ ?

ಭಕ್ತಪುರುಷ ತಾನು ಗೋಪಿಯೆಂದುಕೊಳ್ಳುತ್ತಾನೆ. ಕೇವಲ ಭಕ್ತಿಯಿಂದ ಅವನು ಹಾಗೆ ಮಾಡಿದರೆ ನನಗೆ ತಪ್ಪು ಎನಿಸುವುದಿಲ್ಲ. ದೇವರ ಇದುರಿಗೆ ಎಲ್ಲರೂ ಅಬಲೆಯರೇ.

ಸ್ವರಾಜ್ಯ ಸಿಕ್ಕಮೇಲೆ ಹಿಮಾಲಯ ಶಿಖರ, ಉತ್ತರ ಧ್ರುವಗಳನ್ನು ಹುಡುಕಲು ನಮ್ಮರು ಹೊರಟಾರು.

ಭೌತಶಾಸ್ತ್ರದ ಸಾಮಾನ್ಯಜ್ಞಾನ ಲಾಭದಾಯಕ.

ನನ್ನ ಆಹಾರದ ಪ್ರಯೋಗಗಳಿಂದ ನನಗೇನೂ ಹಾನಿಯಾಗಿಲ್ಲ. ಎಂಟು ವರ್ಷದಿಂದ ದಿನವೂ ನಡದೇ ಇದೆ. Mono-diet–ಏಕಾಹಾರದಿಂದ ಬಹಳ ಲಾಭವುಂಟು.

೩೦-೬-೩೨

ಬಾಪೂನ ಆಶೀರ್ವಾದ.

## ೩೯

ನಿನ್ನ ಕಾಗದ. ಲಕೋಟಿ ಸೊಗಸು ಮಾಡಲು ಹೋಗಿ ಕೆಡಿಸಿದ್ದಿಯೆ. ಕೆಲಸಕ್ಕೆ ಬಾರದ ಸೊಗಸು ಹೀಗೆಯೇ. ಸರದಾರರೂ ಲಕೋಟಿಗೆ ಚೆಂದ ಮಾಡುತ್ತಾರೆ; ಆದರೆ ಅದರ ಉಪಯೋಗವಿದೆ ಎಂದು ಆ ಚೆಂದಕ್ಕೆ ಬೆಲೆ. ಒಮ್ಮೆ ಬರೆದ ಲಕೋಟಿಯನ್ನು ಮತ್ತೆ ಬಳಸಬೇಕಾದರೆ ಬರೆದದ್ದು ಇಲ್ಲದಂತೆ ಕೂಡಬೇಕು. ಅದಕ್ಕಾಗಿ ಅಷ್ಟೇ ಚೀಟಿ ವಿಳಾಸದ ಮೇಲೆ ಅಂಟಿಸಿದರು. ಅದು ಅವರಿಗೆ ಸಮಾಧಾನವಾಗಲಿಲ್ಲ. ಈಗ ಲಕೋಟಿಯನ್ನು ತಿರುವಿಹಾಕುತ್ತಾರೆ. ಆದರಿಂದ ಪಟ್ಟಿ ಹಚ್ಚುವುದೂ ತಪ್ಪಿತು, ಲಕೋಟಿಯೂ ಹೊಸದಿದ್ದಂತೆ ಕಾಣುತ್ತದೆ. ಅದನ್ನು ಸೂಕ್ಷ್ಮವಾಗಿ ನೋಡು, ತಿಳಿದೀತು. ನೀನು ಹಚ್ಚಿದ ಪಟ್ಟಿ ಅರ್ಧ ಬಿಚ್ಚಿಕೊಂಡು ಅಸಹ್ಯವಾಗಿತ್ತು. ಉಪಯೋಗವೂ ಆಗಲಿಲ್ಲ, ಪಟ್ಟ ಕಷ್ಟ ವ್ಯರ್ಥ, ಅಷ್ಟು ಕಾಗದ ದಂಡ, ಜನಕ್ಕೆ ಅಷ್ಟು ನಷ್ಟ. ಇಲ್ಲಿ ನೋಡು, ಸರಿಯಾಗಿ ತಿಳಿದುಕೊಳ್ಳದೆ ಅನುಕರಣ ಮಾಡಬಾರದು. ಶೃಂಗಾರಕ್ಕಾಗಿ ಶೃಂಗಾರ ಎಂದರೆ ಅದು ಶೃಂಗಾರವೇ ಅಲ್ಲ. ಯುರೋಪಿನಲ್ಲಿ ದೊಡ್ಡದೊಡ್ಡ ಚರ್ಚುಗಳಿವೆ. ಅವುಗಳ ಶೃಂಗಾರದ ಹಿನ್ನೆಲೆಗೆ ಉಪಯೋಗವಿದ್ದೇ ಇದೆ, ಎನ್ನುತ್ತಾರೆ. ನಿಜವಿರಬಹುದು, ಸುಳ್ಳಿರಬಹುದು. ನಾನು ಹೇಳಿದ ನಿಯಮದ ವಿಷಯದಲ್ಲಿ ಸಂಶಯಕ್ಕೆ ಎಡೆಯಿಲ್ಲ.

ನಿನ್ನ ಈ ಕಾಗದದಲ್ಲಿ ಸುಪರಿಂಟೆಂಡೆಂಟನ ಮೇಲಿನ ಟೀಕೆಯೇ ಬಹಳ; ಉಳಿದದ್ದೇನೂ ಇಲ್ಲ. ಇಂಥ ಟೀಕೆ ನಿರರ್ಥಕ ಎಂದ ಮೇಲೆ ಅದು ಯೋಗ್ಯವೇ ಅಯೋಗ್ಯವೆ ಎಂಬ ಚರ್ಚೆ ಅನಗತ್ಯ. Judge not

lest ye be judged * ಇದಕ್ಕೆ ಸರಿಯಾದ ವಾಕ್ಯ ಗುಜರಾತಿಯಲ್ಲಿ ಇದ್ದಂತಿಲ್ಲ. ಮರಾಠಿಯಲ್ಲಿದ್ದರೆ ಬರೆ. ಉರ್ದು ಪುಸ್ತಕದ ಪಟ್ಟಿ ಕಳಿಸು. ಶಿಬ್ಲಿ ಪುಸ್ತಕವನ್ನು ಕಳಿಸಿಯೇಕೊಡು. ಅದರ ಜೊತೆಗೆ ಖಲೀಫನ ಜೀವನ ವೃತ್ತವನ್ನೂ ಕೂಡ.

ಸತ್ತರೂ ಪರವಾಯಿಲ್ಲ ನೀನು ಏನೂ ತಿನ್ನುವುದಿಲ್ಲ ಎಂದರೆ ನನಗೆ ಬಹಳ ಸಂತೋಷ. ಇದರರ್ಥ ಕಾಡ್‌ಲಿವರ್ ಎಣ್ಣೆ ಕೂಡ ಬಳಸುವುದಿಲ್ಲ ಎಂದು. ನನ್ನ ಅಭಿಪ್ರಾಯವೇನು ಎಂದು ವಿಚಾರ ಮಾಡಬಾರದು. ನಿನ್ನ ಮನಸ್ಸನ್ನು ತಿಳಿಯಲು ಈ ಪ್ರಶ್ನೆ ಕೇಳಿದೇನೆ. ನಿನ್ನ ಆಹಾರದಲ್ಲಿ ತುಪ್ಪ, ಹಾಲು ಅಥವಾ ಮೊಸರು ಹೆಚ್ಚಾಗಬೇಕು. ಹಸೀ ಪಲ್ಯದ ಬದಲಾಗಿ ಆಗಾಗ ಪಾಡಾದ ಹಣ್ಣು ಇರಬೇಕು. ಈಗ ಅಲ್ಲಿ ಪರಂಗಿ ಹಣ್ಣು (ಪಪಾಯಿ) ಆಗುವುದಿಲ್ಲೇನು ? ಆದರೂ, ಚಲೋ ಇಲ್ಲೇನು ? ಆಶ್ರಮದಲ್ಲಿ ಸೊಪ್ಪಿನ ಪಲ್ಯ ಬೆಳೆಯುವುದಿಲ್ಲವೆ ? ನೀನೇ ಏಕೆ ಟೊಮೊಟೊ ಗಿಡ ಬೆಳೆಸಬಾರದು ? ಲೆಟ್ಯೂಸ್ ಕೂಡ ಬಹಳ ಬೇಗ ಬೆಳೆಯುತ್ತದೆ. ಪರಂಗಿ ಕಾಯಿ ಬಹಳ ತಿನ್ನಬೇಡ; ತಿನ್ನಲೇಬೇಡ. ಖರ್ಚಿನ ವಿಚಾರ ಮಾಡದೆ ಆಹಾರದಲ್ಲಿ ಇಷ್ಟು ಹೆಚ್ಚುಕಡಮೆ ಮಾಡು.

ವಿದ್ಯಾವತಿಯ ಮೌಢ್ಯ ಪ್ರೀತಿಯಿಂದ ಹೋದೀತು......ನ ವಿಷಯ ಕೊಂಚ ಕಷ್ಟ. ಅದಕ್ಕೊಂದೇ ಉಪಾಯ. ಮೂರುತರದ ಪ್ರಭಾವಕ್ಕೊಳಗಾಗಿದಾನೆ ಅವನು. ಆ ಮೂರೂ ಒಮ್ಮುಖವಾದರೆ ಸರಿ, ಇಲ್ಲದಿದ್ದರೆ ಕಷ್ಟ. ಅವನ ತಂದೆ, ತಾಯಿ, ನೀನು–ಅಥವಾ ಅವನ ಮೇಲ್ವಿಚಾರಕರು–ಇವು ಆ ಮೂರು ಶಕ್ತಿ. ಇದರಲ್ಲಿ ಕೂಡ ದಾರಿತೆಗೆಯುವುದು ಪ್ರೇಮದ ಕೆಲಸ. ನಿನ್ನಲ್ಲಿ ಪ್ರೀತಿ ಎಷ್ಟು ವಿಶಾಲವಾದೀತೋ ಅಷ್ಟರಮಟ್ಟಿಗೆ ಮಕ್ಕಳನ್ನು ತಿದ್ದುವುದರಲ್ಲಿ ನಿನಗೆ ಸಹಾಯವಾದೀತು.

---

ಕನ್ನಡದಲ್ಲಿ ಇದರಂಥ ಗಾದೆ ಇವು:—

ಆಡೋದು ಯಾಕೆ ಆಡಿಸಿಕೊಂಬೋಕೆ, ಓಡೋದು ಯಾಕೆ ಕಾಲುಜಾರಿ ಬೀಳೋಕೆ ?

ಅಂದು ಅನಿಸಿಕೊಳ್ಳಬೇಕೆ ಅಂದಗೇಡಿ ? ಕೆಸರಲ್ಲಿ ಕಲ್ಲೊಗೆದರೆ ಮೋರೆಗೆ ಸಿಡಿಯಿತು.

......ಗೆ ಆಗಲೇ ಎರಡು ಮಕ್ಕಳ ಭಾರ. ಆಕೆ ಎಷ್ಟು ಕೆಲಸ ಮಾಡಿಯಾಳು ? ಶಿಶು ಸಂಗೋಪನೆಯೆಂದರೇನೋ ಗೊತ್ತೇ ಇಲ್ಲ, ಆಗಲೆ ಮಕ್ಕಳನ್ನು ಹೆತ್ತು ಕೂತಿದ್ದಾಳೆ. ಇದನೆಲ್ಲ ನಾವು ಧಾರವಾಡೀ ತಕ್ಕಡಿಯಲ್ಲಿ ತೂಗಬಾರದು. ಉದಾರತೆ ಬೆಳೆದಂತೆ ಜನರಿಂದ ಕೆಲಸ ಮಾಡಿಸಿಕೊಳ್ಳುವ ಶಕ್ತಿ ಬೆಳೆಯುತ್ತದೆ. ಸುಳ್ಳೋ ನಿಜವೋ ದೇವರೇ ಬಲ್ಲ; ಆದರೆ ಜನರ ಕಡೆಯಿಂದ ನಾನು ಬಹಳ ಕೆಲಸ ಮಾಡಿಸಿಕೊಳ್ಳು ತೇನೆ ಎನ್ನುತ್ತಾರೆ. ಇದು ನಿಜವಿದ್ದರೆ ಅದರ ಕಾರಣ ಹೀಗೆ: ಅವರು ಕಳುವು ಮಾಡಬಹುದೆಂಬ ಸಂಶಯ ನನಗಿಲ್ಲ. ಯಾರು ಏನು ಕೊಟ್ಟರೂ ಅದರಲ್ಲೇ ನನಗೆ ತೃಪ್ತಿ. ಹೆಚ್ಚು ಕೇಳಿದರೆ ಹೆಚ್ಚು ಕೊಟ್ಟಾರು. ಜನರು ನನಗೆ ಮೋಸ ಮಾಡಿದಷ್ಟು ಉಳಿದವರಿಗೆ ಮಾಡರು ಎಂದು ಹೇಳು ತ್ತಾರೆ. ನಿಜವೇ ಆಗಿದ್ದರೂ ನನಗೇನೂ ಪಶ್ಚಾತ್ತಾಪವಿಲ್ಲ. ನನ್ನ ಆಯುಷ್ಯದಲ್ಲಿ ನಾನು ಯಾರಿಗೂ ಮೋಸ ಮಾಡಲಿಲ್ಲ ಎಂದು ಪ್ರಶಸ್ತಿ ಪತ್ರಿಕೆ ಸಿಕ್ಕರೆ ಸಾಕು. ಯಾರೂ ಕೊಡದಿದ್ದರೆ ನಾನೇ ತೆಗೆದು ಕೊಳ್ಳುತ್ತೇನೆ.

ಎಲ್ಲಕ್ಕಿಂತ ಹೆಚ್ಚಾಗಿ ಅಸತ್ಯ ನನಗೆ ಕೆಡಕೆನಿಸುತ್ತದೆ. Might is right- ಬಲವಿದ್ದವಗೆ ನೆಲ; ಮಾಡಿದ್ದೇ ನ್ಯಾಯ ಮುಷ್ಟಿಬಲಕ್ಕೆ. Greatest good for the greatest number- ಬಹು ಜನರ ಅಧಿಕ ಹಿತ. ಈ ನಿಯಮಗಳು ನನಗೆ ಒಪ್ಪಿಗೆಯಿಲ್ಲ. ಎಲ್ಲರ ಕಲ್ಯಾಣ, ಸರ್ವೋದಯ; ಅಬಲರಿಗೆ ಅಗ್ರಸ್ಥಾನ-ಇವು ಮನುಷ್ಯರಿಗೆ ಇರಬೇಕಾದ ನಿಯಮ. ಎರಡು ಕಾಲಿನ ಮನುಷ್ಯರೆನಿಸಿಕೊಂಡರೂ ನಾಲ್ಕು ಕಾಲಿನ ಪಶು ಸ್ವಭಾವ ನಮಗೆ ಹೋಗಿಲ್ಲ. ಅದನ್ನು ಬಿಡುವುದೇ ಧರ್ಮ.

ಯರವಡಾ ಮಂದಿರ, ೬-೭-೩೭

**ಬಾಪೂನ ಆಶೀರ್ವಾದ.**

## ೪೦

ನಿನ್ನ ಕಾಗದ. ಇನ್ನು ಮೇಲೆ ಎಷ್ಟು ಮಟ್ಟಿಗೆ ಕಾಗದ ಬರೆಯ ಲಾದೀತೋ ಹೇಳಲು ಬರುವುದಿಲ್ಲ. ಕಾಗದಗಳ ಮೇಲೆ ಕತ್ತಿ ಹಿರಿದು

ನಿಂತಿದೆ. ಕಾಗದ ಇಲ್ಲಿಂದ ಹೊರಡುವುದೇ ಇಗಿದ್ದಂತೆ ನಿಧಾನವಾಗಿ. ಹೀಗೇ ನಡೆದರೆ ಬರೆವಾದರೂ ಏನು ಅರ್ಥ ? ಬರುವ ಕಾಗದವೇನೋ ಸಕಾಲಕ್ಕೆ ಬರುತ್ತವೆ. ನಾನು ಬರೆಯುವ ಕಾಗದಗಳ ವಿಷಯವಾಗಿ ಪತ್ರವ್ಯವಹಾರ ನಡೆದಿದೆ. ನನ್ನ ಕಾಗದ ಬಾರದಿದ್ದರೆ ಎಲ್ಲಿಯೋ ನನ್ನ ರಥ ನಿಂತಿದೆ ಎಂದು ತಿಳಿದುಕೊಳ್ಳಬೇಕು. ಅದರಿಂದ ಬೆದರಿ ನಿರಾಶರಾಗ ಬಾರದು. ಬರೆಯಗೊಡುವುದು ಬಿಡುವುದು ಸರಕಾರದ ಕೈಯ ಮಾತು. ಕೈದಿಗೆ ಕಾಗದ ಬರೆಯುವ ಹಕ್ಕಿದೆ ಎಂದು ಕೇಳಲು ಬಾರದು. ಇಷ್ಟು ದಿನ ಕಾಗದ ಬರೆದೆ ಎಂಬ ಕಾರಣದಿಂದ ಆ ಹಕ್ಕು ನನಗೆ ಬರಲಾರದು. ನಮ್ಮ ಹಕ್ಕೇ ಇಲ್ಲದ ವಸ್ತು ಹೋದವು ಎಂದು ದು:ಖಪಡುವ ಕಾರಣವಿಲ್ಲ.

ನಿನ್ನ ಹುಟ್ಟಿದ ಹಬ್ಬಕ್ಕೆ ಬರೆದ ಆಶೀರ್ವಾದ ಪತ್ರ ತಲಪಿರಬೇಕು. ತಡವಾದರೆ ತಾನೆ ಏನು ? ಆ ಕಾರಣದಿಂದ ಅದರ ಬೆಲೆಯೂ ಹೆಚ್ಚಾ ಯಿತು. ದೊರೆಯದಿದ್ದರೂ ಅಪಶಕುನವಾಯಿತು ಎಂದು ತಿಳಿಯಬಾ ರದು. ನಿನ್ನ ಕಾಗದ ಬಂದಮೇಲೆ ನಾನು ಆಶೀರ್ವಾದ ಕಳಿಸದೆ ಇರುವು ದುಂಟೆ ? ಈ ಮೊಗಲಾಯಿ ದರ್ಬಾರಿನಲ್ಲಿ ಕಾಗದ ಸಿಗಲಿಲ್ಲ, ಅಥವಾ ತಡವಾಯಿತು ಎಂದರೆ ಅಪಶಕುನವೇನು ? ನಿಜವಾಗಿ ನೋಡಿದರೆ ಅನಾ ಸಕ್ತನಿಗೆ ಅಪಶಕುನ ಎಂಬುದಿಲ್ಲ. ನಿನ್ನ ಹೊಸ ವರ್ಷ ಕೆಟ್ಟದಾದೀತು ಎಂದು ತಿಳಿಯಬೇಡ. ನಾವು ಕೆಟ್ಟದ್ದನ್ನು ಯೋಚಿಸಿದರೆ, ಇಲ್ಲ ಆಡಿ ದರೆ, ಮಾಡಿದರೆ ವರ್ಷ ಕೆಟ್ಟದ್ದಾದೀತು. ಹಾಗೆ ಮಾಡುವುದು ಬಿಡುವು ದಂತೂ ನಮ್ಮ ಕೈಯಲ್ಲೇ ಇದೆ.

ಗಂಟಲುಚಿಟಿಕೆ (Tonsil) ಕೊಯ್ಯಬೇಕೆಂದು ವೈದ್ಯರ ಅಭಿಪ್ರಾ ಯವಿದ್ದರೆ ಹಾಗೆ ಮಾಡು. ಅದಕ್ಕೆ ಬಹಳ ಹೊತ್ತೂ ಬೇಕಿಲ್ಲ, ಅದರ ಲ್ಲೇನು ಅಪಾಯವೂ ಇಲ್ಲ. ನಿನ್ನ ಮೈ ರೋಗರಹಿತವಾಗಬೇಕು. ಅವರವರ ಶರೀರದ ವಿಷಯ ಅವರವರಿಗೇ ಹೆಚ್ಚು ಗೊತ್ತು. ನಮಗೇ ಗೊತ್ತಿರದಿದ್ದರೆ ಡಾಕ್ಟರ್ ಕೇಳಿದ್ದಕ್ಕೆ ಉತ್ತರ ಸರಿಯಾಗಿ ಕೊಡಲಾ ರೆವು. ಸುಮ್ಮನೆ ತಲೆನೋವು ಎಂಬ ಮಾತ್ರಕ್ಕೆ ವೈದ್ಯ ಏನು ಹೇಳಬಲ್ಲ ?

ತಲೆನೋವಿಗೇನು ಕಾರಣ ಎಂಬುದು ರೋಗಿಯ ಮನಸಿಗೂ ಹೊಳೆಯ ಬೇಕು. ಇದೇ ಮಾತು ಅನೇಕ ವಿಷಯಗಳಿಗೂ ಅನ್ವಯವಾಗುತ್ತದೆ. ಆರೈಕೆಯ ಬಗೆಗೂ ಹೀಗೆಯೆ. ಇಂಥ ಆರೈಕೆಯಿಂದ ಏನು ಪರಿಣಾಮ ಎಂಬುದು ವೈದ್ಯರಿಗೆ ತಿಳಿಯುವುದಿಲ್ಲ. ಅದು ರೋಗಿಯನ್ನೆ ಅವಲಂಬಿಸಿದೆ. ಆರೈಕೆಯ ಪರಿಣಾಮ ಏನಾಯ್ತೋ ಎಲ್ಲ ರೋಗಿಗಳಿಗೂ ತಿಳಿದುಕೊಳ್ಳಲು ಬರುವಂತಿಲ್ಲ. ಆಹಾರ ನಾವು ಶರೀರಕ್ಕೆ ಮಾಡುವ ನಿತ್ಯೋಪಚಾರ. ಉಂಡವನಿಗೆ ಪರಿಣಾಮ ಗೊತ್ತಾದೀತು. ಗಾಳಿ, ನೀರು, ಅನ್ನದ ಪರಿಣಾಮವೇನು ಎಂಬುದನ್ನು ತಿಳಿದವನು ಮೈಯನ್ನು ಸ್ವಾಧೀನದಲ್ಲಿಟ್ಟುಕೊಂಡ ಹಾಗೆ ವೈದ್ಯರಿಗೂ ಸಾಧ್ಯವಿಲ್ಲ. ಅಂತೆಯೆ, ಎಲ್ಲರೂ ಸಾಮಾನ್ಯವಾಗಿ ಶರೀರಜ್ಞಾನ ಉಂಟುಮಾಡಿಕೊಳ್ಳಬೇಕು. ಗಾಳಿ, ನೀರು, ಅನ್ನದ ಬಗ್ಗೆಯೂ ಅಷ್ಟೆ. ಇದಕ್ಕೆ ಬೇಕಾದ ಸಾಹಿತ್ಯ ನಮ್ಮಲ್ಲಿದೆ, ಅದನ್ನೆಲ್ಲ ಓದಬೇಕಾಗಿಲ್ಲ: ಕೊಂಚ ತಿಳಿದುಕೊಂಡರೂ ಕೆಲಸವಾದೀತು. ....ರು ತಮ್ಮ ಸ್ವಂತ ಪ್ರಯತ್ನದಿಂದಲೇ ತಮ್ಮ ಶರೀರವನ್ನು ಉತ್ತಮವಾಗಿ ಮಾಡಿಕೊಂಡಿದಾರೆ. ನನಗೆ ಬೇಕಾದಷ್ಟು ಜ್ಞಾನವನ್ನು ನಾನು ಗಳಿಸದಿದ್ದರೆ ನನ್ನ ಕಥೆಯೆ ಎಂದೋ ಮುಗಿದು ಹೋಗುತ್ತಿತ್ತು. ನನ್ನ ಶ್ರದ್ಧೆಯಿಂದಲೇ ನನ್ನ ಹರಕು ಮುರುಕು ಮೈ ಇಷ್ಟು ದಿನ ಬಾಳಿದೆ. ನನಗೆ ನಂಬಿಗೆಯಿದೆ; ಇದರಲ್ಲಿ ವೈದ್ಯರ ಕೈಯೇನೂ ಬಹಳವಿಲ್ಲ.

೨೪-೭-೩೨

**ಬಾಪೂನ ಆಶೀರ್ವಾದ.**

## ೪೧

ನಿನ್ನ ಅದೃಷ್ಟವೇ ಕೆಟ್ಟದ್ದು ಎನ್ನಬೇಕೋ ಏನು ? ನಾನಂತೂ ಆಶೀರ್ವಾದ ಪತ್ರಿಕೆ ಮರುಟಪಾಲಿಗೇ ಕಳಿಸಿದ್ದೆ. ಆದರದು ತ್ರಿಶಂಕು ಸ್ವರ್ಗದಲ್ಲೇ ನಿಂತಿತ್ತು. ನಿನ್ನೆ ಕಳಿಸಿದ್ದರೂ ಕಳಿಸಿರಬಹುದು. ಕಾಗದದಲ್ಲಿ ಬರೆದ ಆಶೀರ್ವಾದದಿಂದ ಏನಾಗಬೇಕು ? ಅಂತಃಕರಣದಲ್ಲಿ ಬೇಕು.

ಅದಂತೂ ಇದ್ದೇ ಇದೆ. ಅಂತಃಕರಣ ಏನೇನು ಕೆಲಸ ಮಾಡುತಿರುತ್ತ ದೆಯೋ ನಮಗೆ ತಿಳಿಯದು. ಅದೇ ನಿಜ, ಉಳಿದುದು ಜೊಳ್ಳು.

ಹೊಸದಾಗಿ ಸೋದರಿಯರು ಬಂದಿದಾರೆ. ಅವರಲ್ಲಿ ಬರೆಯಲು ಬಂದವರಿಗೆ ಕಾಗದ ಬರೆಯಹೇಳು, ......ಳನ್ನು ಚೆನ್ನಾಗಿ ಗುರುತು ಮಾಡಿಕೋ. ಅವಳದು ದುಃಖದ ಕಥೆ.

ನನಗೆ ಪ್ರೆಸಿಡೆಂಟ ವಿಲ್ಸನ್‌ನ ಜೀವನದ ಪರಿಚಯವಿಲ್ಲ. ನಾನು ಕೇಳಿದ್ದರಲ್ಲಿ ಆತ ದೊಡ್ಡ ಮನುಷ್ಯ; ಆತನ ಉದ್ದೇಶ ಚಲೋ.

ಕಳೆದ ಯುದ್ಧದಿಂದ ಲಾಭವಾದಂತೆ ಕಾಣುವುದಿಲ್ಲ. ಭೀತಿಯ ಬಲ ತಗ್ಗಿದೆ, ದ್ವೇಷ ಬೆಳೆದಿದೆ; ಕಾದುವ ಮನಸ್ಸು ತಗ್ಗಿಲ್ಲ, ಲೋಭ ಬೆಳೆದಿದೆ.

ವ್ಯಕ್ತಿಯನ್ನೋ ವಸ್ತುವನ್ನೋ ಉದ್ದೇಶಿಸಿ ಪ್ರಾರ್ಥನೆ ಮಾಡ ಬಹುದು. ಅದಕ್ಕೆ ಫಲವೂ ಸಿಕ್ಕೀತು. ಆದರೆ ಉದ್ದೇಶವಿಲ್ಲದೆಯೆ ಮಾಡಿದ ಪ್ರಾರ್ಥನೆಯಿಂದ ಆತ್ಮಕಲ್ಯಾಣ, ಜಗದ್ಧಿತ ಆದೀತು. ಪ್ರಾರ್ಥನೆಯ ಸಂಸ್ಕಾರ ನಮ್ಮ ನಮ್ಮ ಮೇಲೆಯೆ ಆಗುತ್ತದೆ. ಅದರಿಂದ ಅಂತರಾತ್ಮ ಹೆಚ್ಚು ಜಾಗ್ರತನಾಗುತ್ತಾನೆ. ಅಂತರಾತ್ಮದ ಜಾಗೃತಿ ಹೆಚ್ಚಿದಂತೆ ಅದರ ಸಂಸ್ಕಾರ ವಿಸ್ತಾರವೂ ಬೆಳೆಯುತ್ತದೆ. ಅದು ಅಂತಃಕರಣದ ಮಾತು. ಪ್ರಾರ್ಥನೆಯನ್ನು ಬಾಯಿಂದ ಹೇಳುವುದು ಅಂತಃಕರಣವನ್ನು ಎಚ್ಚರಿಸಲಿಕ್ಕೆ. ಹೊರಗಿದ್ದ ವ್ಯಾಪಕಶಕ್ತಿ ಒಳಗೂ ಇದೆ; ಅಷ್ಟೇ ವ್ಯಾಪ ಕವಾಗಿದೆ. ಅದಕ್ಕೆ ಶರೀರ ನಿರ್ಬಂಧವಲ್ಲ. ನಿರ್ಬಂಧಗಳನ್ನು ಹುಟ್ಟಿಸು ವವರು ನಾವು. ಪ್ರಾರ್ಥನೆಯಿಂದ ಆ ಅಡ್ಡಿಗಳೆಲ್ಲ ದೂರಾಗುತ್ತವೆ. ಪ್ರಾರ್ಥನೆಗೆ ಈಕ್ಷಿತಫಲ ದೊರೆಯಿತೋ ಇಲ್ಲವೋ ನಮಗೆ ಗೊತ್ತಾ ಗುವುದಿಲ್ಲ. ....ಳ ಮುಕ್ತಿಗಾಗಿ ನಾನು ಪ್ರಾರ್ಥನೆ ಮಾಡಿದೆ, ಆಕೆಗೆ ದುಃಖವಿಮೋಚನೆ ಆಯಿತು; ಇದು ನನ್ನ ಪ್ರಾರ್ಥನೆಯ ಫಲ ಎಂದು ತಿಳಿಯಬಾರದು. ಪ್ರಾರ್ಥನೆ ನಿಷ್ಫಲವೆಂದಿಗೂ ಅಲ್ಲ. ಆದರೆ ಯಾವ ಫಲ ಕೊಟ್ಟಿತೆಂಬುದು ನಮಗೆ ತಿಳಿಯದು. ನಾವು ಬೇಡಿದ ಫಲವೇ ನಮಗೆ ದೊರೆತರೆ ಅದು ಸರಿ ಎಂದು ತಿಳಿಯುವುದು ಯೋಗ್ಯವಲ್ಲ.

ಇಲ್ಲಿಯೆ ಗೀತಾಬೋಧೆಯನ್ನು ಆಚರಣೆಗೆ ತರಬೇಕಾದುದು. ಪ್ರಾರ್ಥನೆ ಅನಾಸಕ್ತವಾಗಿರಬೇಕು. ಯಾರ ವಿಷಯವಾಗಿಯೆ ಪ್ರಾರ್ಥನೆ ಮಾಡಿದರೂ ಅನಾಸಕ್ತರಾಗಿರಲು ಸಾಧ್ಯವಿದೆ. ಯಾರಿಗಾದರೂ ಮೋಕ್ಷ ಸಿಗಲೆಂದು ಪ್ರಾರ್ಥನೆ ಮಾಡಿದರೂ ಅನಾಸಕ್ತರಾಗಿ ಮಾಡಬಹುದು. ಅವರಿಗೆ ಮುಕ್ತಿದೊರೆಯಲಿ ಬಿಡಲಿ ನಾವು ನಿಶ್ಚಿಂತರಾಗಿರಬೇಕು. ವಿರುದ್ಧ ಪರಿಣಾಮವಾದರೆ ಪ್ರಾರ್ಥನೆ ನಿಷ್ಫಲ ಎನ್ನಲು ಬಾರದು. ಇದಕ್ಕೂ ಹೆಚ್ಚು ವಿವರ ಬೇಕೇನು ?

ಉರ್ದು ಪುಸ್ತಕದ ಪಟ್ಟಿ-ನಾನು ಹೇಳಿದ್ದು-ಗಮನವಿರಲಿ. ಈ ಕಾಗದ ಯಾವಾಗ ಮುಟ್ಟೀತೋ ನಿಶ್ಚಯವಿಲ್ಲ. ಅನಿಶ್ಚಿತತೆಯಲ್ಲಿ ನಿಶ್ಚಿಂತರಾಗಿರುವುದನ್ನು ಕಲಿಯುವುದು, ಅದರಲ್ಲಿ ನಿಶ್ಚಿತತೆಯನ್ನು ಕಾಣುವುದು-ಇದು ನಮ್ಮ ಕೆಲಸ.

ಯರವಡಾ ಮಂದಿರ, ೧೭-೭-೩೨

ಬಾಪೂನ ಆಶೀರ್ವಾದ.

೪೨

ನಿನ್ನ ಕಾಗದ. ನಿನ್ನ ಮೂರ್ಖತನಕ್ಕೆ ಮಿತಿಯೇ ಇಲ್ಲ. ಸಿಟ್ಟು ಬಂದಾಗ ನಿನಗೆ ಮೈಮೇಲೆ ಎಚ್ಚರ ಇರುವುದಿಲ್ಲ. ಕ್ರೋಧವನ್ನು ಗೆಲ್ಲಲು ವ್ರತತೊಟ್ಟ ಕಾಗದನಲ್ಲೇ ನಿಷ್ಕಾರಣ ಕ್ರೋಧ ! ನನ್ನ ಸೀ ಪಟ್ಟಿನ ಕಾರಣ ನಿನಗೆ ತಿಳಿಯಲಿಲ್ಲ. ಲಕೋಟೆಯ ಮೇಲೆ ಹಚ್ಚಿದ ಪಟ್ಟಿ ಚೆಂದವಿರಲಿಲ್ಲ ಎಂದು ನನ್ನ ಆಕ್ಷೇಪಣೆಯಿತ್ತು. ಕಲಾವ್ಯಾಸಂಗದಲ್ಲಿ ಹೊತ್ತು ಕಳೆದರೆ ನಾನು ಆಕ್ಷೇಪಿಸುವುದಿಲ್ಲ. ಆದರೆ ಅದರಲ್ಲಿ ಕಲೆಯ ಗಂಧವೇ ಇರಲಿಲ್ಲ. ಲಕೋಟೆಯ ಮೇಲೆ ಇಂಥ ಪಟ್ಟಿ ಹಚ್ಚುವುದು ಕಲೆಯೇ ? ಅಂಟಿಸಿದ್ದು ಅರ್ಧಕಿತ್ತಿ ಬಂದಿದ್ದವು. ನಿನ್ನ ಸಿಟ್ಟು ಅವಿಚಾರದ್ದು. ನನಗೆ ನಗೆ ಬಂತು. ಹತ್ತಿರವಿದ್ದರೆ ಕೆನ್ನೆಗೆ ಕೊಡುತ್ತಿದ್ದೆ. ಸಿಟ್ಟಿನಿಂದ ಹೀಗೆ ಹುಚ್ಚುಹುಚ್ಚಾಗಿ ಬರೆದಿದ್ದೀಯಲ್ಲ ? ಅಷ್ಟು ಹೊತ್ತು ಹಾಳು ಮಾಡಿದೆ. ಮಾಡಬಾರದ ಯುಕ್ತಿವಾದ ಮಾಡಿದೆ, ಮೈಯನ್ನು ದಣಿಸಿದೆ. ಸಿಟ್ಟಿನ ಪರಿಣಾಮ ಮೈಮೇಲೆ ಬಹಳ. ಭೌತಶಾಸ್ತ್ರದಲ್ಲಿ

ಪ್ರಯೋಗ ಮಾಡಿ ಪ್ರಮಾಣ ಮಾಡಿದ್ದಾರೆ. ನಮ್ಮಲ್ಲೂ ಹೀಗೇ ತಿಳಿದಿದ್ದೆವು. ಸಾಲದ್ದಕ್ಕೆ ನಿನ್ನ ವ್ರತಭಂಗ ಬೇರೆ ಆಯಿತು. ಮತ್ತೆ ಹೀಗೆ ಸಿಟ್ಟಾಗಬೇಡ. ನನ್ನ ಟೀಕೆಯೂ ಸರಿ ಟೀಕೆಯಾಗಿತ್ತು. ಅದನ್ನು ತಿಳಿದು ಕೊಳ್ಳಲಾರದಷ್ಟು ಎಚ್ಚರದಪ್ಪಿದೆಯಲ್ಲ.

ಆದರೆ ಆದಿತ್ಯವಾರ, ಹೋದರೆ ಸೋಮವಾರ ನಮ್ಮ ಕಾಗದ ಗಳನ್ನು ಹೀಗೆ ತಿಳಿಯಬೇಕು. ಕಾಗದ ತಲಪದಿದ್ದರೆ ದುಃಖಪಡಬಾರದು. ನೀನು ಮಾತ್ರ ಕಾಗದ ಬರೆಯುತ್ತ ಹೋಗು. ತಡೆದು ನಿಲ್ಲಿಸಿದರೆ ನಾನು ಬರೆಯುತ್ತೇನೆ. ಇಷ್ಟು ಸುದ್ದಿಯನ್ನು ಕೂಡ ಕೊಡಲಾರದೆ ಹೋದರೂ ಬರೆದದ್ದೇನು ವ್ಯರ್ಥವಾಗದು.

ಹೊಸದಾಗಿ ಬಿಟ್ಟ ಹೂಗಳಿಗೆ ನನ್ನ ನಮಸ್ಕಾರ ಹೇಳು. ಅವು ಗಳ ನಡುವೆ ಮಲಗುವ ಬಯಕೆಯಿದೆ ಎಂದು ಹೇಳಿ ನನ್ನ ಆಶ್ವಾಸನ ಕೊಡು.

ನಿನಗೆ ಸ್ವಾಭಿಮಾನ ಬಹಳ. ಹೂವಿನ ಸುತ್ತಲೂ ಟೊಮ್ಯಾಟೊ, ಪಲ್ಯ ಬೆಳೆಸಿದರೆ ಹನ್ನೆರಡೂ ತಿಂಗಳು ಫಲ ಸಿಕ್ಕೀತು. ಅಷ್ಟು ಶರೀರ ವ್ಯಾಯಾಮವೂ ಆದೀತು. ಶರೀರ ನಿನ್ನದಲ್ಲ, ನಿನಗೆ ಕೊಟ್ಟ ದೇವರದು. ಅದರ ರಕ್ಷಣೆಗಾಗಿ ಸಮಯ ಕೊಡಲೇಬೇಕು. ಸಣ್ಣಸಣ್ಣ ಗಿಡಗಳಿಗೆ ಹೊತ್ತು ಬಹಳ ಹಿಡಿಯದು. ನೆಲ ಕೂಡ ಸ್ವಲ್ಪವೇ ಸಾಕು. ನನ್ನ ಜೊತೆಗಿದ್ದ ಇಂಗ್ಲಿಷ್ ಗೆಳೆಯರೊಬ್ಬರು ದಕ್ಷಿಣ ಆಫ್ರಿಕದಲ್ಲಿ ಸ್ವಲ್ಪ ಕಾಲದಲ್ಲೇ ಏನೂ ಕಷ್ಟಪಡದೆಯೆ ಕ್ರೇಸ್ ಪಲ್ಯವನ್ನು ಬೆಳೆಸಿದ್ದರು.

ಹುಡುಗಿಯರ ಕಾಯಿಲೆಯ ವಿಷಯ ಬರೆದಿದ್ದೆ. ಆಳವಾಗಿ ವಿಚಾರ ಮಾಡು. ....ನ ವಿಷಯವಾಗಿ ನನಗೆ ಹೆದರಿಕೆಯಿತ್ತು. ಅವನು ನಿನಗೆ ಎಲ್ಲಾ ಹೇಳಿದಾನೆ. ಅವನನ್ನು ಒಲಿಸು. ಇನ್ನು ನಿನ್ನ ತೊಂದ ರೆಗಳ ವಿಷಯ:

೧. ವ್ಯಕ್ತಿಪೂಜೆಗಿಂತ ಗುಣಪೂಜೆ ಯೋಗ್ಯ. ವ್ಯಕ್ತಿ ಕೃತ್ರಿಮ ವಾದಾನು, ಗುಣ ಹಾಗಲ್ಲ.

೨. ಆಶ್ರಮಸಂಚಾಲಕರಲ್ಲಿ ಅನೇಕ ಜನ ನಮಗೆ ಸೇರದಿರಬಹುದು;

ಅವರನ್ನು ಸೈರಿಸಿಕೊಳ್ಳಲು ಇದು ಅತ್ಯುತ್ತಮ ಸಂದರ್ಭ. ನಿರ್ದೋಷಿಗಳು ಯಾರೂ ಇಲ್ಲ. ತನ್ನಂತೆ ಪರರ ಬಗೆದರೆ ಅವರು ಸೇರುತ್ತಾರೆ. ಇವರು ಸರಿಜೀಳುವುದಿಲ್ಲ ಎಂಬ ಮಾತೇ ಅಳಿಸಿ ಹೋಗುತ್ತದೆ.

೩. ಆಶ್ರಮದ ತತ್ವಕ್ಕೆ ಒಪ್ಪಿಗೆಯಿದ್ದರೆ, ಅದರ ಬಾಹ್ಯಸ್ವರೂಪದ ಬಗ್ಗೆ ಮತಭಿನ್ನತೆಯಿದ್ದರೂ ಚಿಂತೆ ಮಾಡಬಾರದು. ನಮಗೆ ತತ್ವಬೇಕು, ಬಾಹ್ಯಸ್ವರೂಪವಲ್ಲ.

೪. ನಿನ್ನ ಸ್ವಭಾವದೋಷಗಳನ್ನು ತಿದ್ದಿಕೊಳ್ಳಲು ನೀನು ಆಶ್ರಮದಲ್ಲಿರಬೇಕು. ಇದು ಧರ್ಮ.

೫. ಆಶ್ರಮದಲ್ಲಿ ನಿನ್ನ ಧ್ಯೇಯ ಸಾಧನೆಯಾಗದಿದ್ದರೆ ತಪ್ಪು ಆಶ್ರಮದ್ದಲ್ಲ, ನಿನ್ನದು. ಆಶ್ರಮದಲ್ಲಂತೂ ಸಂಪೂರ್ಣ ಸ್ವಾತಂತ್ರ್ಯವಿದೆ.

೬. ನಿನ್ನ ಪ್ರೀತಿಯ ಜನರ ಸೆಳೆತ ಆಶ್ರಮದ ಹೊರಗೆ ಒಯ್ಯುವಂಥದ್ದೇಕಾಗಬೇಕು? ಅದರ ಬದಲು, ಅವರನ್ನೇ ಅಲ್ಲಿಗೆ ಎಳೆಯುವ ಹಾಗಿರಬೇಕು ಕೆಲಸವಿದ್ದಾಗ. ಪ್ರೇಮಕ್ಕೆ ಶಾರೀರಿಕ ಸಾನ್ನಿಧ್ಯ ಅಗತ್ಯವಿರಕೂಡದು. ಹಾಗಿದ್ದರೆ ಅಂಥದು ಕ್ಷಣಿಕಪ್ರೇಮ. ಪ್ರೇಮಿಗಳ ವಿಯೋಗದಲ್ಲಿ, ಅಥವಾ ಮರಣಾನಂತರ ಪ್ರೇಮದ ಬಣ್ಣ ತಿಳಿಯುತ್ತದೆ. ಇದೆಲ್ಲಾ ಬುದ್ಧಿವಾದ. ನಿನ್ನ ಹೃದಯವಿದ್ದಲ್ಲಿ ನೀನು ಇರುತ್ತೀ. ಆಶ್ರಮದಲ್ಲಿ ನಿನ್ನ ಹೃದಯಕ್ಕೆ ಸಮಾಧಾನವಾಗದಿದ್ದರೆ ನಾನು ಏನು ತಾನೆ ಮಾಡಲಿ, ನೀನು ತಾನೆ ಏನು ಮಾಡುತ್ತೀ?

ನಾನು ತೆಗೆದ ನೂಲಿನಿಂದ ನೀನು ಸೀರೆ ನೇಯಿಸಿಕೋ. ನೂಲಿನ ವಿಷಯ ನಾನು ಮೊನ್ನೆ ಹೇಳಿದೆನಲ್ಲ. ಅದಕ್ಕೆ ಹಿಂದಿನ ನೂಲು ಇದು. ಬಾ ಗಾಗಿ ಅದನ್ನು ಇಟ್ಟಿತ್ತು. ಅದನ್ನು ಆಕೆಯೇ ಕೊಡಬೇಕು; ನಾನಲ್ಲ. ಬಾ ಬಹಳ ದಪ್ಪಸೀರೆ ಉಡಲಾರಳು. ಆಶ್ರಮದ ಕಡೆಯಿಂದಲೂ ಆಕೆಗೆ ತೆಳುಸೀರೆಯೇ ಸಿಗಬೇಕು. ನಾನು ತೆಗೆದ ನೂಲಿನ ಸೀರೆಯನ್ನು ಬಾ ಸಂತೋಷವಾಗಿ ಉಟ್ಟಾಳು. ಇನ್ನು ಮುಂದೆ ತೆಗೆದ ನೂಲಿನ ಬಗ್ಗೆ ಒಳ್ಳೇ ಕಟ್ಟುನಿಟ್ಟಾಗುತ್ತೇನೆ. ಅದರಲ್ಲೂ ಕೂಡ ಬಾ ಮೇಲೆ ನನ್ನ ಆಗ್ರಹವಿಲ್ಲ. ಆಕೆಯೇ ಸಂತೋಷದಿಂದ ತ್ಯಾಗಮಾಡಿ, ತನ್ನ ಪಾಲಿಗೆ

ಬಂದದ್ದರಲ್ಲಿ ತೃಪ್ತಿಗೊಳ್ಳಲಿ. ಇದು ನನ್ನ ಇಷ್ಟ. ಇದು ಮುಂದಿನ ಮಾತು; ಸದ್ಯ, ಈಚೆಗೆ ನಾನು ತೆಗೆದ ನೂಲು ಇಲ್ಲೇ ಇದೆ. ಏನೇ ಆಗಲಿ, ನನ್ನ ನೂಲು ಹಾಗೇ ಬೀಳಬಾರದು. ಯಾರ ನೂಲೂ ಮೂಲೆಗೆ ಬೀಳಬಾರದು. ನೇಯಲಿಕ್ಕೆ ಸಾಕಾಗುವಷ್ಟು ನೂಲು ಸಿದ್ಧವಾದ ಕೂಡಲೆ ಅದರ ಏರ್ಪಾಡಾಗಬೇಕು.

....ನೂಲುತ್ತಿದಾಳೆಂದು ತಿಳಿಯುತ್ತೇನೆ. ನೀನು ಬರೆದದ್ದು ಸರಿಯೆ. ಎಷ್ಟೋ ಜನ ಹೆಂಗಸರು ನೂಲುವುದು ಬಿಟ್ಟು ಕಸೂತಿ ಮೆಚ್ಚುತ್ತಾರೆ. ತಿನ್ನುವುದರಲ್ಲಿದ್ದಂತೆಯೆ ಕೆಲಸದಲ್ಲಿ; ಭಕ್ರಿ ಬಿಟ್ಟು ಬೋಂಡಾ (ಭಜಿ) ದ ಕಡೆ ಮನಸು ಹರಿಯುತ್ತದೆ. ರೊಟ್ಟಿಯ ಮೇಲೆ ಇರುವುದು ಸಂಯಮ, ತ್ಯಾಗ; ಬೋಂಡಾದ ಕಡೆ ಹೋಗುವುದು ಸ್ವಚ್ಛಂದವೃತ್ತಿ. ಅದರಂತೆ ನೂಲುವುದು ಸಂಯಮ, ಉಳಿದ ಮಾತಿನ ಕಡೆ ಹೋದರೆ ಸ್ವಚ್ಛಂದ.

Judge not last ye be judged– ಪರರ ನಾವಾಡಿಕೊಂಡರೆ ನಮ್ಮನ್ನೂ ಪರರು ಆಡಿಕೊಂಡಾರು. ಇದರ ಟೀಕೆ ನಿನಗೊಪ್ಪದು. ನಿನಗೆ ಅದರ ಅರ್ಥವೇ ಆಗಿಲ್ಲ. ನಿನ್ನ ಟೀಕೆಯಲ್ಲಿ ವಿಶೇಷ ಅಹಂಕಾರ ತುಂಬಿದೆ. ಇತರರು ನಮ್ಮನ್ನು ಆಡಿಕೊಂಡಾರು ಎಂಬುದರ ಅರ್ಥ ನಾವು ಅಂಥ ತಪ್ಪು ಮಾಡಬಾರದು ಎಂದು. ಪ್ರಪಂಚದ ಮುಂದೆ ನಾವು ಗರ್ವಿಷ್ಠರಾಗಿ ನಿಲ್ಲಬಾರದು. “ಪ್ರಪಂಚ ಬೇಕಾದದ್ದು ಅನ್ನಲಿ, ಮಾಡಲಿ” ಎಂಬ ಮಾತು ನಮ್ಮಿಂದ ಹೊರಟೀತು ಹೇಗೆ? ಪ್ರಪಂಚದ ಇದಿರು ನಾವು ಕ್ಷುದ್ರರು. ಸತ್ಯದ ದಾರಿಯಲ್ಲೇ ನಾವು ನಡೆದಿದ್ದರೂ ಪ್ರಪಂಚಕ್ಕೆ ನಾವು ಪಂಚಾಯತರಾಗಿ ಕೂಡುವುದಿಲ್ಲ; ಅವರು ಕೊಟ್ಟ ತೀರ್ಪು, ಶಿಕ್ಷೆ ಮಾತ್ರ ಏನೂ ಇದಿರಾಡದೆ ಸೈರಿಸುತ್ತೇವೆ. ಇದಕ್ಕೇ ನಮ್ರತೆ, ಅಹಿಂಸೆ ಎನ್ನುತ್ತಾರೆ. ನಿನ್ನ ಬರಹ ವ್ಯಂಗ್ಯಪೂರ್ಣವಾಗಿದೆ, ಸಿಟ್ಟಿನಿಂದ ತುಂಬಿದೆ. ಇನ್ನೊಮ್ಮೆ ಹಾಗೆ ಬರೆಯಬೇಡ. ನನ್ನ ಮೇಲೆ ಸಿಟ್ಟಾಗಿದ್ದೀಯೆ, ಪರವಾಯಿಲ್ಲ; ನಾನು ನಕ್ಕು ನಿನ್ನ ಸಿಟ್ಟಿಳಿಸಬಲ್ಲೆ. ಆದರೆ ಈ ಶಬ್ದಗಳು ಮಾತ್ರ ಮುಳ್ಳಿನಂತೆ ಚುಚ್ಚುತ್ತವೆ. ನಿನ್ನ ಲೇಖನಿಯಿಂದ

ಇಂಥ ಶಬ್ದಗಳೂ ಬರಬಾರದು, ತಲೆಯಲ್ಲಿ ಇಂಥ ವಿಚಾರವೂ ಬರಬಾರದು. ವಿಚಾರ ಬಂತು, ನನ್ನಿದಿರಿಗೆ ಆಡಿತೋರಿಸಿದೆ; ಸರಿ. ಆಡಿತೋರಿಸಿದೆ ಎಂದೇ ತಿಪ್ಪಲಿಕ್ಕೆ ಬರುತ್ತದೆ. ಇನ್ನೊಮ್ಮೆ ಇಂಥ ವಿಚಾರ ಬಂದರೆ ಮುಚ್ಚಿಡಬೇಕೆಂದು ನಾನೀಸಂಗತಿ ಬರೆದಿಲ್ಲ. ನೀನು ಹೇಗಿದ್ದಿಯೋ ಹಾಗೆ-ಹುಚ್ಚಿ, ಗರ್ವಿ, ನಮ್ರ-ನೋಡಲು ಬಯಸುತ್ತೇನೆ. ಆದರೆ ಒಂದು ಹೇಳುತ್ತೇನೆ ನೋಡು, ಇಂಥ ವಿಚಾರ ಎಂದೂ ನಿನ್ನ ಮನಸ್ಸಿನಲ್ಲಿ ಮೂಡದಿರಲಿ.

ಬಲವಾಗಿ ಮರ್ದನ (ಮಾಲೀಸು) ಮಾಡಲು ಶಕ್ತಿ ಬೇಕಾಗಿಲ್ಲ. ಯುಕ್ತಿಬೇಕು.

ನೀನು ಏನೇನು ಓದುತ್ತಿಯೋ ಅದನ್ನೇ ಬರೆಯುತ್ತೀ ಎಂದು ನಾನು ತಿಳದಿದ್ದೆ. ಈಗ ಹಾಗಿಲ್ಲ. ಮಾಲ್ಥಸ್ ಬರೆದದ್ದು ಜನರಿಗೆ ಅರ್ಥವಾಗಿಲ್ಲ; ಮಾಡಿಕೊಂಡವರು ತಪ್ಪು ಅರ್ಥ ಮಾಡಿಕೊಂಡಿದಾರೆ. ಪಶುಪ್ರಾಣಿಗಳಿಗೆ ಅನ್ವಯಿಸಿದ ನಿಯಮ ಮನುಷ್ಯರಿಗೆ ಅನ್ವಯಿಸದು. ಅವು ಇತರ ಪ್ರಾಣಿಗಳನ್ನು ಕೊಂದು ತಿಂದು ಬದುಕುತ್ತವೆ. ಈ ಸ್ಥಿತಿಯಿಂದ ಮೇಲೇರಲಿಕ್ಕೆ ಮನುಷ್ಯ ಪ್ರಯತ್ನ ಮಾಡುತ್ತಾನೆ. ಇದರಲ್ಲಿ ಅವನ ಅಹಿಂಸೆಯಿದೆ. ದೇಹವಿರುವವರೆಗೆ ಪೂರ್ಣ ಅಹಿಂಸೆಯನ್ನು ಮುಟ್ಟಲಿಕ್ಕಿಲ್ಲ. ಭಾವನೆಯಲ್ಲಾದರೂ ಅಹಿಂಸೆಯನ್ನು ಬೆಳೆಸಿಕೊಂಡರೆ ಕಡಮೆ ಕಡಮೆ ಹಿಂಸೆಯಿಂದ ನಿರ್ವಾಹ ಮಾಡಿಕೊಳ್ಳಬಲ್ಲ. ತಾನು ಸತ್ತು ಪರರು ಬದುಕಲೆನ್ನುವುದು ಮನುಷ್ಯನ ವೈಶಿಷ್ಟ್ಯ. ಮನುಷ್ಯ ಬೆಳೆದಂತೆ ಅವನ ಆಹಾರವೂ ಬೆಳೆಯುತ್ತದೆ. ಇನ್ನೂ ಅವನಲ್ಲಿ ಬೆಳೆಯುವ ಶಕ್ತಿಯಿದೆ. ಡಾರ್ವಿನ್‌ನ ಶೋಧದ ತರುವಾಯ ಎಷ್ಟೋ ಹೊಸ ಶೋಧಗಳಾಗಿವೆ. ನೀನು ಓದುತ್ತಿರುವ ಪುಸ್ತಕ ಹಳೆಯದು. ಹಳೆಯದಿರಲಿ, ಹೊಸದಿರಲಿ, Might is right; Greatest good for the greatest number- ಈ ನಿಯಮ ತಪ್ಪು. ಎಲ್ಲರ ಕಲ್ಯಾಣ ಚಿಂತನೆಯೇ ಅಹಿಂಸೆಯ ಗುಣ. ಸರ್ವಕಲ್ಯಾಣವೇ ದೇವರ ನ್ಯಾಯ. ಅದು ಹೇಗೆ ಕೊಡಲ್ಪಡುತ್ತದೆ, ಅದರಲ್ಲಿ ನಮ್ಮ ಕರ್ತವ್ಯವೇನು-ಎಂಬುದನ್ನು ತಿಳಿದುಕೊಳ್ಳುವುದು ನಮ್ಮ ಕೆಲಸ. ಈ ನೀತಿಗೆ ವಿರುದ್ಧವಾಗಿ ಮತ್ತೊಂದು

ನೀತಿಯನ್ನು ತಂದಿಡುವುದು ನಮ್ಮ ಕೆಲಸವಲ್ಲ. ಹೋಗಲಿ, ಇದು ಗಹನವಿಷಯ. ಸಂಗ್ರಹವಾಗಿ ನಿನಗೆ ಸ್ವಲ್ಪ ಹೇಳಿದೇನೆ. ಇನ್ನೂ ಚರ್ಚಿಸಬೇಕಾಗಿದ್ದರೆ ಪ್ರಶ್ನೆ ಕೇಳು.

ಯರವಡಾ ಮಂದಿರ, ೩೦-೭-೩೨

ಬಾಪೂನ ಆಶೀರ್ವಾದ.

೪೩

ಗನೇ ತೇದಿಯ ಕಾಗದ ಬಂತು. ಛಾತ್ರಾಲಯದಲ್ಲಿ ನಡೆದಿರುವ ಭರ್ತಿಯಿಂದ ನಿನಗೆ ಗಾಬರಿಯಿಲ್ಲವಷ್ಟೆ. ಒಳ್ಳೆ ಹುಡುಗಿಯರಾದರೆ ಕಷ್ಟವಿಲ್ಲ. ಅಲ್ಲ, ಅನಾಸಕ್ತಿಯ ಪಾಠವನ್ನು ನಾವು ಚೆನ್ನಾಗಿ ಕಲಿತಿದ್ದರೆ ನಮಗೆ ಕಷ್ಟವಾದರೂ ಏನು ? ನಿನ್ನ ಶರೀರಾರೋಗ್ಯಕ್ಕಾಗಿ ಇತರರು ಏನು ಹೇಳಬಲ್ಲರು; ಮೇಲುಪಚಾರ ಹೇಳಬಲ್ಲರು. ಅಂತರಂಗದ ಮಾತು ನೀನೇ ಬಲ್ಲೆ. ಮಾನಸ ಶಾಸ್ತ್ರಪಂಡಿತರನ್ನು ನಾನು ಅಷ್ಟು ನಂಬುವುದಿಲ್ಲ. ಎಷ್ಟೇ ಪಂಡಿತನಿರಲಿ, ಮನುಷ್ಯನ ಮನಸ್ಸನ್ನು ಎಲ್ಲಿಯ ತನಕ ತಿಳಿದುಕೊಂಡಾನು ? ನಿನ್ನ ಮೈಗೂ ಮನಸಿಗೂ ಇರುವ ಸಂಬಂಧ ನಿನಗೇ ತಿಳಿಯಬೇಕು; ಅದಕ್ಕೆ ತಕ್ಕ ಉಪಾಯವನ್ನೂ ಮಾಡಬೇಕು. ಅದೇ ಕಾಗದನಲ್ಲಿ ನೀನು ಹೀಗೆ ಬರೆದಿದ್ದೀಯೆ: ಸಣ್ಣ ದೊಡ್ಡ ಕೆಲಸ, ನಿದ್ದೆ, ಜಾಗರಣೆಗಳ ಪರಿಣಾಮ ಶರೀರದ ಮೇಲೆ ಆಗದೆ ಬಿಡದು. ನಿಜವಾಗಿ ನೋಡಿದರೆ ಆಂತರ್ಯಬಾಹ್ಯಗಳೆರಡೂ ಶರೀರ ಸ್ವಾಸ್ಥ್ಯಕ್ಕೆ ಸಂಬಂಧಿಸಿದ್ದು. ಬಾಹ್ಯಸಾಧನೆಯನ್ನು ಅಸಡ್ಡೆಮಾಡಿ ಕೇವಲ ಮನೋಬಲದಿಂದಲೇ ದೇಹವನ್ನು ನಿರೋಗಿಯಾಗಿ ಇಟ್ಟುಕೊಳ್ಳುವುದು ಯಾರಿಗೂ ಸಾಧ್ಯವಲ್ಲ. ಅಂತೇ ನಿದ್ದೆ, ವಿಶ್ರಾಂತಿ, ಕೆಲಸಗಳ ಬಗ್ಗೆ......ರು ಏನು ಹೇಳುತ್ತಾರೋ ಕೇಳು. ಮನಸ್ಸನ್ನೂ ಪರೀಕ್ಷಿಸಿಕೋ. ಏನಾದರೂ ಮಾಡಿ ಮೈಯನ್ನೂ ಕಬ್ಬಿಣದಂತೆ ಮಾಡಿಕೋ.

ಅಂತರ್ನಾದ Intution ವರ್ಣನೆ ಮಾಡಲು ಬಾರದು. ಒಳಗಿನಿಂದ ಪ್ರೇರಣೆಯಾಯಿತೆಂದು ಎಷ್ಟೋ ಸಲ ನಮಗೆ ಅನಿಸಿಯೇ ಬಿಡುತ್ತದೆ.

ಈ ಅಂತರ್ನಾದವನ್ನು ಗುರುತಿಸಲು ನಾನು ಕಲಿತದ್ದು ನನ್ನ ಪ್ರಾರ್ಥನೆಯ ಕಾಲದಲ್ಲಿ. ಎಂದರೆ ೧೯೦೬ ರ ಸುಮಾರಿಗೆ. ನೀನು ಕೇಳಿದ್ದೀ ಎಂದು ನೆನಪುಮಾಡಿಕೊಂಡು ಬರೆಯುತ್ತಿದ್ದೇನೆ. ಹಾಗೆ ನನಗೆ ಎಂದೂ 'ಇದೇನು, ಏನೋ ಹೊಸ ಅನುಭವವಾಯಿತಲ್ಲ' ಎಂದು ಭಾಸವಾಗಿಲ್ಲ. ಕೂದಲು ನಮಗೆ ತಿಳಿಯದೆಯೆ ಬೆಳೆಯುವಂತೆ ನನ್ನ ಆಧ್ಯಾತ್ಮಿಕ ಜೀವನದ ಬೆಳೆವಣಿಗೆ.

ನಾಮಜಪದಿಂದ ಹೀಗೆ ಪಾಪಹರಣವಾಗುತ್ತದೆ; ಶುದ್ಧಭಾವದಿಂದ ನಾಮಜಪ ಮಾಡುವವರಿಗೆ ಶ್ರದ್ಧೆ ಅನಿವಾರ್ಯ. ನಾಮಜಪದಿಂದ ಪಾಪಹರಣವಾಗುತ್ತದೆಯೆಂಬ ನಿಶ್ಚಯದಿಂದಲೇ ಅವನು ಪ್ರಾರಂಭ ಮಾಡುತ್ತಾನೆ. ಪಾಪಹರಣವೆಂದರೆ ಆತ್ಮಶುದ್ಧಿ. ಶ್ರದ್ಧೆಯಿಂದ ನಾಮ ಜಪ ಮಾಡುವವನಿಗೆ ಬೇಸರ ಎಂದೂ ಇಲ್ಲ. ನಾಲಗೆಯ ಮೇಲಿನದು ಎದೆಯಲ್ಲಿ ಮೂಡುತ್ತದೆ. ಇದು ಅಪವಾದವಿಲ್ಲದ ಅನುಭವ. ವಿಚಾರ ಮಾಡಿದಂತೆ ಆಗುತ್ತಾನೆ ಮನುಷ್ಯ ಎಂಬುದು ಮಾನಸಶಾಸ್ತ್ರ ನಿಯಮ. ರಾಮನಾಮವೂ ಈ ನಿಯಮಕ್ಕೆ ಸರಿ. ನಾಮಜಪದಲ್ಲಿ ನನಗೆ ಸಂಪೂರ್ಣ ನಂಬಿಗೆಯಿದೆ. ಈ ದಾರಿ ಹುಡುಕಿದವರು ಒಳ್ಳೆ ಅನುಭವಿಗಳು; ಇದನ್ನು ಹುಡುಕಿ ಬಹಳ ಉಪಕಾರ ಮಾಡಿದಾರೆ. ಅವಿದ್ವಾಂಸನಿಗೂ ಕೂಡ ಆತ್ಮಶುದ್ಧಿಯ ದಾರಿ ತೆರೆದಿರಬೇಕು. ಅದು ನಾಮಜಪದಿಂದ ಸಾಧ್ಯ. (ನ. ತಾ. ೯–೨೨; ೧೦–೧೭) ಮನಸ್ಸಿನ ಏಕಾಗ್ರತೆಗೆ ಸಾಧನೆ ಜಪಸರ.

ವಿದ್ಯಾಭ್ಯಾಸ ಸೇವೆಗಾಗಿಯೆ. ಸೇವೆಯಲ್ಲಿ ಅಪೂರ್ವ ಆನಂದವಿದೆ. ಅಂತೆಯೆ ವಿದ್ಯೆ ಆನಂದಕ್ಕಾಗಿ ಎನ್ನಬಹುದು. ಸೇವೆ ಬಿಟ್ಟು ಕೇವಲ ಸಾಹಿತ್ಯವಿಲಾಸಗಳಿಂದಲೇ ಅಖಂಡಾನಂದ ಪಡೆದದ್ದನ್ನು ಯಾರೂ ಕೇಳಿಲ್ಲ.

ಯಾವದೇಶಕ್ಕೂ ವ್ಯಕ್ತಿಗೂ ಕಲೆಯು ಗುತ್ತಿಗೆ ಕೊಟ್ಟಿಲ್ಲ. ಯಾವುದರಲ್ಲಿ ಮರೆಮಾಡಬೇಕಾದದ್ದು ಇದೆಯೋ ಅದು ಕಲೆಯಲ್ಲ.

ತನ್ನ ತನ್ನ ಉದ್ಯೋಗರಕ್ಷಣೆ ಎಲ್ಲ ದೇಶದ ಧರ್ಮ.

ಆಸರೆಯಿಲ್ಲದವನಿಗೆ ಆಸರೆ ಕೊಡುವುದು ಅಹಿಂಸಕರ ಧರ್ಮ. ಹಾಗೆ ನಿರಾಶ್ರಯಿ ಯಾರು ಎಂಬುದಕ್ಕೆ ಪರಿಸ್ಥಿತಿಯೇ ಪ್ರಮಾಣ. ಹೊರಗೆ ಕೆಟ್ಟವರಾಗಿ ಕಂಡವರು ಒಳಗೂ ಕೆಟ್ಟವರಾಗಿ ಇರಬೇಕಾಗಿಲ್ಲ. ಉರ್ದು ಪುಸ್ತಕ ಹೊರಗೆ ಸೊಗಸು ಕಾಣವು. ಪ್ರಕಾಶಕರ ಬಡತನ ಅದರಿಂದ ತಿಳಿಯುತ್ತದೆ. ಒಳಗೆ ಒಳ್ಳೇ ಲೇಖನವಿಲ್ಲದೆ ಉಂಟೆ? ಎಷ್ಟೋ ಪುಸ್ತಕ ಹೀಗಿವೆ. ಇದರಲ್ಲಿ ಇಷ್ಟಾನಿಷ್ಟದ ಮಾತೇನು ಬಂತು? ಉರ್ದು ಕಲಿಯುವುದು ಕರ್ತವ್ಯ. ಅದರಲ್ಲಿ ಸವಿಯೂ ಇದೆ; ಕರ್ತವ್ಯ ಸವಿಯಲ್ಲವೆ! ಎಂದಾದರೂ ಉರ್ದು ಕಲಿವ ಪ್ರಯಾಸ ಪಟ್ಟರೆ ನಿನಗೂ ಅದರಲ್ಲಿ ರುಚಿ ಕಂಡೀತು.

ಯರವಡಾ ಮಂದಿರ, ೮-೭-೩೨

**ಬಾಪೂನ ಆಶೀರ್ವಾದ.**

## ೪೪

ಪರಚುರೆ ಶಾಸ್ತ್ರಿಗಳಿಗೆ ಕೆಳಗೆ ಬರೆದ ಪುಸ್ತಕ ಬೇಕಾಗಿವೆ. ಇದ್ದರೆ ಕಳಿಸಬೇಕು; ಇಲ್ಲದ್ದು ಬೇರೆ ಕಡೆಯಿಂದ ತರಿಸುತ್ತೇನೆ. ಬೇಗ ಕಳಿಸಿದರೆ ಅನುಕೂಲ. ಪರಚುರೆ ಶಾಸ್ತ್ರಿಗಳು ಆಶ್ರಮದಲ್ಲಿದ್ದವರು. ದೊಡ್ಡ ವಿದ್ವಾಂಸರು. ಸದ್ಯ ಜೇಲಿನಲ್ಲಿದಾರೆ. ಅವರಿಗೆ ಕುಷ್ಠರೋಗ ಬಂದಿದೆ. ಅಂತೇ ಅವರಿಗೆ ಪುಸ್ತಕ ಕೊಡಬೇಕು. ದಿನವೂ ನೂಲುತ್ತಾರೆ. ಅವರನ್ನು ನೋಡಲು ಅವಕಾಶವಿಲ್ಲ, ಕಾಗದ ಬರೆಯಬಹುದು. ಅವರ ಹೆಂಡತಿಗೆ ಕೂಡ ಕಾಯಿಲೆ. ಆಕೆ ಹೊರಗಿದ್ದಾಳೆ.

ಪುಸ್ತಕಗಳು — Imitation of Christ; Works of Swami Vivekananda (ಇದ್ದದ್ದು); Works of Sister Nivedita (ಇದ್ದದ್ದು); Essays of Tolstoy ವ್ಯಾಕರಣ ಮಹಾಭಾಷ್ಯ; ಯಜುರ್ವೇದ ಭಾಷ್ಯ; Dispensation of Keshabchandra Sen.

ನಿನ್ನ ಕಾಗದ ಬಂತು. ಮನಸುಮಾಡಿದರೆ ಸರಸ ಪತ್ರ ಬರೆಯಲು ನನಗೆ ಬರುತ್ತದೆಯೆಂದು ನೀನು ತಿಳಿದಂತೆ ಅನಿಸುತ್ತದೆ. ಹಾಗಿಲ್ಲ ಎಂಬದು ನಿನ್ನ ಲಕ್ಷ್ಯದಲ್ಲಿರಲಿ. ಯಾವುದು ನೀರಸ, ಯಾವುದು ಸರಸ

ಎನ್ನುವುದೇ ನನಗೆ ತಿಳಿಯದು. ನೀನು ಸರಸವೆಂದದ್ದು ನಿಜ ಎನ್ನಬಲ್ಲ ವರು ಯಾರು? ರಸಿಕತನದ ಅಳತೆಗೋಲನ್ನು ದೇವರೇ ತನ್ನ ಪೆಟ್ಟಿಗೆ ಯೊಳಗೆ ಬೀಗಹಾಕಿ ಇಟ್ಟುಕೊಂಡಿದಾನೆ. ಆದ್ದರಿಂದ ರಸಿಕತನದ ಅಳತೆ ಅವರವರ ಮನಸಿಗೆ ಬಂದಂತೆ. ನಿನ್ನ ತೂಕಕ್ಕೆ ತಕ್ಕಂತೆ ಆಗುವ ಪ್ರಯತ್ನ ನಾನು ಮಾಡಿದರೆ ನನ್ನ ಕೆಲಸವೇ ಮುಗಿದೀತು. ನನ್ನ ಹೊತ್ತೆಲ್ಲ ಅದಕ್ಕೇ ಆದೀತು. ಒಂದು ಕಾಗದ ನೀರಸ ಎನಿಸೀತು; ಮತ್ತೊಂದು. ಅನೂ ಹಾಗೇ ಆದರೆ ಮತ್ತೂ ಒಂದು. ಹೀಗೇ ಕೂತು ಬಿಡಲೇನು? ನಿನಗೊಂದು ಸರಸಪತ್ರ ಬರೆದೆ, ಇನ್ನೊಬ್ಬರಿಗೂ ಬರೆಯಬೇಕಲ್ಲ. ಕೊನೆಗೇನು? ದಿವಾಳಿ ತಾನೆ. ಅದರ ಬದಲು ನನ್ನದು ಸರಳ ಮಾರ್ಗ. ಸರಸ ನೀರಸದ ವಿಚಾರ ಮಾಡದೆ ಮನಸಿಗೆ ತಿಳಿದಂತೆ ಬರೆದು ಹಾಕು ವುದು. ನಿನಗೋ ಮೂರ್ಖತನ; ಅಭಿಮಾನ ಬೇರೆ. ಇಂಥ ಸುಲಭವಾದ ಮಾತು ನಿನಗೆ ಹೇಗೆ ತಿಳಿದೀತು? ನೋಡುತ್ತಾ ಇದೇನಲ್ಲ; ನಾನು ಸರ್ವಜ್ಞಳು ಎಂದು ನಿನ್ನ ಜಂಬ. ನಾನು ಬರೆದ ಬುದ್ಧಿವಾದ ನಿನಗೆ ಗೊತ್ತಿದ್ದಂತೆಯೆ ಕಾಣುತ್ತದೆ. ಇಲ್ಲಿ ನೋಡು; ತನಗೆ ಎಲ್ಲಾ ಗೊತ್ತಿದೆ ಅನ್ನುತ್ತ ಆಚರಣೆ ಮಾಡಲಾರದವರಿಗೆ ಏನೂ ಗೊತ್ತೇ ಇಲ್ಲ, ಗೊತ್ತಿ ದ್ದರೂ ಅರ್ಥವಾಗಿಲ್ಲ. ನನ್ನ ಅಭಿಪ್ರಾಯ ಹೀಗೆ: ನೀನು ಹುಚ್ಚು ಹುಚ್ಚಾಗಿ ಬರೆಯುವ ತನಕ, ಸಿಟ್ಟು ಬಿಡದಷ್ಟುರವರೆಗೆ, ಗರ್ವಪಡುವ ತನಕ ಮೂರ್ಖಳೇ ಸರಿ. ಹೀಗೆಂದರೆ ನಿನ್ನ ಜಂಬ, ಹುಚ್ಚು, ಸಿಟ್ಟು ಮುಚ್ಚಿಡಬೇಕೆಂದಲ್ಲ. ಆ ಗುಣ ಇರುವ ತನಕ ನೀನು ಹಾಗೇ ಬರೆಯ ಬೇಕು. ಇದ್ದದ್ದು ಇದ್ದ ಹಾಗೆ ಕಾಣಿಸಿಕೊಳ್ಳುವುದರಲ್ಲೇ ನಿನ್ನ ಕಾಗದದ ಬೆಲೆ. ಹುಚ್ಚಿಯಾಗಿ ಉಳಿದರೂ ಪರವಾಯಿಲ್ಲ, ದುರಭಿಮಾನ ತಗ್ಗಿಸು. ಸಿಟ್ಟನ್ನು ಮಾತ್ರ ಪೂರಾ ಕಿತ್ತಿಹಾಕು. ಪೂರಾ ತೆಗೆದು ಹಾಕುವುದು ಅಸಾಧ್ಯ. ನಾರದಮುನಿಯ ಉದಾಹರಣೆ ಕೊಟ್ಟಿದ್ದೀ. ಅವರ ವಚನದ ರಹಸ್ಯ ನೀನೇನು ಬಲ್ಲೆ? ಅವಶ್ಯವಾಗಿ ಅವರಂತೆ ವ್ಯಕ್ತಿ ಪೂಜೆ ಮಾಡು; ಯೋಗ್ಯ. ವೈಕುಂಠದ ಭಗವಂತನೆಷ್ಟು ಐತಿಹಾಸಿಕವೋ ಅವರ ಕೃಷ್ಣನೂ ಅಷ್ಟೇ. ನಾರದಮುನಿಯ ದೇವರು ಅವರ ಕಲ್ಪನಾ

ಮಂದಿರದಲ್ಲಿ ವಿರಾಜಿಸಿದ್ದ. ಮುನಿಗಳೂ ಅವರ ಕೃಷ್ಣನೂ ಇಂದಿಗೂ ಇದ್ದಾರೆ. ಇಬ್ಬರೂ ಕಾಲ್ಪನಿಕರೇ. ನನ್ನ ದೃಷ್ಟಿಗೆ ಇತಿಹಾಸಕ್ಕಿಂತ ಕಲ್ಪನೆ ದೊಡ್ಡದು. ರಾಮನಿಗಿಂತ ರಾಮನಾಮ ದೊಡ್ಡದು; ತುಲಸೀದಾಸ ಹೇಳಿದಾನೆ. ನೀನು ವ್ಯಕ್ತಿ ಪೂಜೆಯ ಸುಳಿಮಡುವಿನಲ್ಲಿ ಸಿಕ್ಕಿದ್ದೀಯೆ. ಹೀಗೆ ಮಾಡಿ ಚಿಂತೆಯೊಳಕ್ಕೆ ಇಳಿಸುತ್ತೀಯೇನು ನನ್ನನ್ನು? ಆಶ್ರಮದ ವಿಷಯದಲ್ಲಿ ನೀನು ನನಗೆ ಅಭಯ ಕೊಡಲಾರೆ. ......ನು ಧೈರ್ಯ ಮಾಡಿದ. ಇಂಥ ದೃಷ್ಟಾಂತ ಬೇರೆ ಇವೆ. ಅವನೂ ವ್ಯಕ್ತಿ ಪೂಜಕನೇ. ಯಾರು ಅಲ್ಲ? ಕೊನೆಗೆ ವ್ಯಕ್ತಿಯನ್ನು ದಾಟಿ ಹೋಗಿ ಅವರ ಗುಣದ, ಕೃತಿಯ ಪೂಜಾರಿ ಆಗುತ್ತಾರೆ. ಬೆಲೆಯಿಲ್ಲದ ಈ ಮಾತನ್ನು ಮರೆತು ನಾವು ಹೆಂಗಸರಿಗೆ ಸತಿ ಹೋಗುವ ದಾರಿ ತುಳಿಸಿ ವ್ಯಕ್ತಿ ಪೂಜೆಯ ಪರಮಾವಧಿಗೆ ಮುಟ್ಟಿದೆವು. ತನ್ನ ಬಾಳುಬದುಕಿನಲ್ಲಿ ಪತಿರಾಯನ ಪ್ರಭಾವ ಅಮರವಾಗಿ ನಿಲ್ಲುವಂತೆ ಮಾಡುವುದೇ ಸತೀಧರ್ಮ. ಸತಿಪತಿಯರ ನಡುವಿನ ವಿಕಾರ, ನರನಾರಿಯರಲ್ಲಿನ ಜಾತಿಭೇದಗಳನ್ನು ಅಳಿಸುವುದೇ ಆದರ್ಶ. ಇದು ಸರ್ವಕಾಲಕ್ಕೂ ಸೇರಿದ್ದು. ಈ ಪ್ರೇಮ ಪರಮೇಶ್ವರನಲ್ಲಿ ಲೀನವಾಗುತ್ತದೆಂದು ಅದರ ಅರ್ಥ.

....ನು ಬರುವ ಸುದ್ದಿ ಕೇಳಿ ನಿನಗೇಕೆ ಇಷ್ಟು ಗಾಬರಿ? ಬಂದರೂ ಅವನನ್ನು ನಿಗ್ರಹಿಸುವ ಆತ್ಮವಿಶ್ವಾಸವಿರಲಿ. ಒಲವು ಎಲ್ಲವನ್ನೂ ಗೆಲ್ಲುತ್ತದೆ ಎಂಬ ಅಮರವಾಕ್ಯ ನಿನ್ನ ಮನಸಿನಲ್ಲಿ ಮೂಡಲಿ. ಯಾರೇ ಬರಲಿ, ಪ್ರಸನ್ನ ಚಿತ್ತರಾಗಿರುವುದು ನಮ್ಮ ಧರ್ಮ. ನಮ್ಮ ಕೈಲಾದಷ್ಟು ಸೇವೆಮಾಡಿ ಪಾರಾಗುವುದೇ ನಮ್ಮ ಕೆಲಸವಲ್ಲವೇ? ಉಳಿದ ಹುಡುಗರಂತೆ ಅವನೂ ದಾರಿಗೆ ಬಂದಾನು ಎಂದು ತಿಳಿಯಲೊಲ್ಲೆಯೇಕೆ? ಅವನಿಗೂ ಬುದ್ಧಿ ಬಂದಿರುವ ಸಂಭವವಿದೆ. ಅವನ ವಿಷಯವಾಗಿ ನನಗೆ ಬಹಳ ಆಸೆಯಿದೆ.

ಹುಡುಗಿಯರ ಸೇವೆ ಮಾಡಿಮಾಡಿ ನೀನು ಕರಗಿಹೋಗಬೇಕು. ಯಾರ ಜೊತೆಗೂ ಮನಬಿಚ್ಚಿ ಮಾತಾಡದವರೇ ಆದರೆ ಅವರೆಲ್ಲ ಕಾಯಿಲೆ ಬಿದ್ದಾರು. ....ಳಿಗೆ ನಾನು ಬರೆದ ಕಾಗದ ಓದು. ಅವಳು ಇಷ್ಟಪಟ್ಟರೆ ಬುದ್ಧಿಬಂದ ಹುಡುಗಿಯರಿಗೂ ಓದಿ ತೋರಿಸು.

ಬಾಳೆಹಣ್ಣಿನಲ್ಲಿ ವಾತಗುಣವಿದ್ದಂತೆ ನನಗೆ ಅನುಭವವಾಗಿಲ್ಲ. ನಾನು ತಿಂದಷ್ಟು ಬಾಳೆಯಹಣ್ಣು ಯಾರೂ ತಿಂದಿರಲಾರರು. ಎಷ್ಟೋ ವರ್ಷ ಅದೇ ನನ್ನ ಮುಖ್ಯ ಆಹಾರವಾಗಿತ್ತು. ಹಾಲಿಲ್ಲ, ರೊಟ್ಟಿಯಿಲ್ಲ, ಬರೇ ಬಾಳೆಹಣ್ಣು, ಆಲಿವ್ ಎಣ್ಣೆ, ನೆಲಗಡಲೆ, ನಿಂಬೆಯಹಣ್ಣು. ಯಾವಾಗಲೂ ವಾತವಾಗಲಿಲ್ಲ. ಎಷ್ಟೋ ವರ್ಷದ ನಂತರ ಮತ್ತೆ ತಿನ್ನುತ್ತಿದೇನೆ. ಅವಗುಣವೇನೂ ಕಾಣಲಿಲ್ಲ. ಆದರೆ ಅದಕ್ಕೊಂದು ಪದ್ಧತಿಯಿದೆ. ಬಾಳೆ ಪೂರಾ ಹಣ್ಣಾಗಿರಬೇಕು, ಇಲ್ಲದಿದ್ದರೆ ಬೇಯಿಸಬೇಕು: ಬಾಳೆಕಾಯಲ್ಲಿ ಬರೀ ಪಿಷ್ಟ. ಪಿಷ್ಟವನ್ನು (Starch) ಬೇಯಿಸದೆ ತಿನ್ನಬಾರದೆಂಬುದನ್ನು . . . .ರ ಪ್ರಯೋಗದಲ್ಲಿ ಕಂಡೆ. ಬಾಳೆಹಣ್ಣು ಪೂರ್ತಿಯಾಗಿರದಿದ್ದರೆ, ಹಣ್ಣಾಗಿರದಿದ್ದರೆ ತಿನ್ನ ಕೂಡದು. ೨-೩ ದಿನ ಇಟ್ಟರೆ ಹಣ್ಣಾಗುತ್ತದೆ. ಅವಸರವಾದರೆ ಬೇಯಿಸಿಯೆ ತಿನ್ನಬೇಕು.

ನನಗೆ ವಿರೋಧಿಗಳು ಹಿಂದೆಯೂ ಇದ್ದರು; ಈಗಲೂ ಇದಾರೆ. ಅವರ ಮೇಲೆ ನನಗೆ ಕೋಪವಿಲ್ಲ. ಕನಸಿನಲ್ಲೂ ನಾನವರಿಗೆ ಕೆಡಕು ಬಯಸಲಿಲ್ಲ. ಇದರಿಂದ ಎಷ್ಟೋ ವಿರೋಧಿಗಳು ನನ್ನ ಮಿತ್ರರಾಗಿದಾರೆ. ನನ್ನಿದುರಿಗೆ ಯಾರ ವಿರೋಧವೂ ಬಹಳ ಕಾಲ ನಿಂತಿಲ್ಲ. ಮೂರು ಸಲ ವಿರೋಧಿಗಳು ನನ್ನನ್ನು ಕೊಲ್ಲಲು ಬಂದರು. ಆದರೂ ನಾನು ಬದುಕಿಯೇ ಇದೇನೆ. ವಿರೋಧಿಗಳಿಗೆ ಎಂದೂ ಜಯವೇ ಇಲ್ಲ ಎಂದಲ್ಲ ಇದರ ಅರ್ಥ. ಅವರಿಗೆ ಜಯ ಸಿಗಲಿ ಬಿಡಲಿ, ನನಗೇನು ಅದರ ಗೊಡವೆಯಿಲ್ಲ. ಅವರ ಹಿತ ಬಯಸುವುದೂ, ಪ್ರಸಂಗ ಬಂದರೆ ಅವರ ಸೇವೆ ಮಾಡುವುದೂ ಕೂಡ ನನ್ನ ಧರ್ಮ. ನಾನು ಯಥಾಶಕ್ತಿ ಈ ಸಿದ್ಧಾಂತವನ್ನು ನಡೆಯಲ್ಲಿ ತಂದಿದೇನೆ. ಇದು ನನ್ನ ಸ್ವಭಾವದಲ್ಲೇ ಇದೆ ಎಂದು ನನಗನಿಸುತ್ತದೆ.

ಲಕ್ಷಗಟ್ಟಲೆ ಜನ ನನ್ನನ್ನು ಪೂಜಿಸುವುದು ನೋಡಿ ನನಗೆ ಬಹಳ ಸಂಕಟವಾಗುತ್ತದೆ. ಆ ಪೂಜೆ ನನಗೆ ಎಂದೂ ರುಚಿಸಿಲ್ಲ. ನಾನದಕ್ಕೆ ಯೋಗ್ಯನೆಂದು ನಾನು ತಿಳಿದಿಲ್ಲ; ಅಯೋಗ್ಯ ಎಂಬ ಜ್ಞಾನ ನನಗಿದೆ. ಮಾನದ ಹಸಿವು ಇದ್ದಂತೆ ನನಗೆ ನೆನಪಿಲ್ಲ. ಕೆಲಸದ ಹಸಿವು ಮಾತ್ರ ತುಂಬಾ ಇದೆ. ಗೌರವಕೊಡುವವರಿಂದ ಕೆಲಸ ತೆಗೆದುಕೊಳ್ಳಲು ನಾನು

ಬಹಳ ಕಷ್ಟಪಟ್ಟಿದ್ದೇನೆ. ಕೆಲಸಮಾಡದವರು ಕೊಡುವ ಗೌರವ
ಗಾವುದಗಾವುದ ಓಡಿ ಹೋಗಿದೇನೆ. ಎಲ್ಲಿಗೆ ತಲಪಬೇಕಾಗಿದೆ
ಅಲ್ಲಿಗೆ ತಲಪಿದ ಮೇಲೆ ನಾನು ಕೃತಾರ್ಥನಾದೆ ಎಂದು ತಿಳಿದುಕೊ
ತ್ತೇನೆ. 'ಲೇಕಿನ್ ಐಸಾ ದಿನ್ ಕಹಾಂಸೆ, ಜಬ್ ಪಿಯಾಕೆ ಪಾಂವ್
ಜಾತೀ.'

ಜಗತ್ತನ್ನು ಇದಿರಿಸಿ ನಿಲ್ಲುವ ಬಲವನ್ನು ಗಳಿಸಲು ಸೊ
ತಿರಸ್ಕಾರ ಬೇಕಿಲ್ಲ. ಯೇಸು ಜಗತ್ತಿಗೆ ಇದಿರು ನಿಂತ. ಬುದ್ಧ ತ
ಕಾಲಕ್ಕೆ ಇದಿರುಹೋದ. ಪ್ರಹ್ಲಾದನೂ ಹಾಗೆಯೇ. ಅವರೆಲ್ಲರ
ವಿನಯದ ವಿಗ್ರಹಗಳಾಗಿದ್ದರು. ಅದಕ್ಕೆ ಆತ್ಮವಿಶ್ವಾಸ, ಪ್ರಭುಭ
ಬೇಕು. ಸೊಕ್ಕಿನಿಂದ ಇದಿರಿಸಿದವರು ಕಡೆಗೆ ಕೆಳಗೆ ಬೀಳುತ್ತಾರೆ. ನಿ
ಸೊಕ್ಕು, ಸಿಟ್ಟು ಎಷ್ಟೋ ಸಲ ಬರೀ ಸೋಗು. ಆದರೇನು, ಅದ
ಕೆಟ್ಟದೇ. ಸೋಗು ಬರಬರುತ್ತ ರೂಢಿಯಾದೀತು. ಜನಕ್ಕೆ ತಪ್ಪುತಿ
ವಳಿಕೆಗೆ ಕಾರಣವಾದೀತು. ಹೀಗಾಗದಂತೆ ಎಚ್ಚರದಿಂದ ನಡೆಯುವುದ
ಅವಶ್ಯಕ. ಆತ್ಯಂತಿಕ ನಮ್ರತೆಯು ವಿನಾ ಒಬ್ಬನೇ ಆದರೂ ಕಡೆತನ
ನಿಲ್ಲುವ ಶಕ್ತಿ ಬರಲಾರದು. ಈ ಶಕ್ತಿ ಬಂದಿದ್ದರೆಯೇ ಅದು ನಿಜವಾ
ನಮ್ರತೆ. ಇದರ ಒರೆಗಲ್ಲು ಅದೇ. ವೀರಾಧಿವೀರರು ಹಾಗಿದ್ದರೊ
ಇಲ್ಲವೋ ಒರೆಗೆ ಹಚ್ಚುವ ಸಂದರ್ಭ ಸಮಾಜಕ್ಕೆ ಸಿಕ್ಕಿರುವುದಿಲ್ಲ.

ಯರವಡಾ ಮಂದಿರ, ೨೮–೮–೩೨

**ಬಾಪೂನ ಆಶೀರ್ವಾದ.**

**೪೫**

ನಿನ್ನ ಕಾಗದ. ರಾಖೀ (ಕಂಕಣದಾರ) ಮುಟ್ಟಿತು. ಎರಡು ದಿ
ತಡವಾಗಿ ಬಂದರೂ ಸೋಮವಾರವೇ ಬಂದಿತೆಂದು ತಿಳಿಯುತ್ತೇನೆ.

ನಿನ್ನ ಮೈಗೆ ಒಗ್ಗದಿದ್ದರೆ ಬಾಳೆಹಣ್ಣು ತಿನ್ನಬೇಡ. ಒಬ್ಬೊಬ್ಬರ
ಪ್ರಕೃತಿಧರ್ಮ ಒದೊಂದು ರೀತಿ. ನಿನ್ನ ಸಿಟ್ಟಿನ ಪೃಥಕ್ಕರಣ ತಿಳಿಯಿತು
ನೀನು ಕ್ರೋಧ ಗೆಲ್ಲು. ಗೆಲ್ಲುವೆಯೆಂದು ನನಗೆ ವಿಶ್ವಾಸವಿದೆ.

ನಮಗೆ ಬೇಕು ಎನಿಸಿದ್ದನ್ನು ಹೇಳದೆ ಇರುವುದು ಬಹಳ ತಪ್ಪು

ದುರಭಿಮಾನ, ಅನ್ಯಾಯ. ಆದರಿಂದ ಇಷ್ಟುಜನರಿಗೆ ಬಹಳ ಭಾರವಾಗುತ್ತದೆ. ನಮ್ಮ ಅಗತ್ಯಗಳನ್ನು ತಿಳಿದುಕೊಳ್ಳುವ ಕಷ್ಟ ಅವರಿಗೆ ಆಗದಿರಬೇಕಾದರೆ, ನಮಗೆ ವಿನಯ-ನಿರಭಿಮಾನಗಳು ಬೇಕು. ಇದು ವಿನಯದ ಮೊದಲ ಪಾಠ. ಈಗ ಕಲಿ.

ಲೋಕಮತ ಎಂದರೆ ನಾವು ಬೆಲೆ ಕೊಡುವ ಸಮಾಜದ ಅಭಿಪ್ರಾಯ. ಇದೂ ಕೂಡ ನೀತಿ ವಿರುದ್ಧವಾಗದಿರುವ ತನಕ ಅದಕ್ಕೆ ಬೆಲೆ. (ಶ್ರೀರಾಮ ಜನಾಪವಾದಕ್ಕೆ ಹೆದರಿ ಸೀತೆಯನ್ನು ಕಾಡಿಗಟ್ಟಿದನೆಂಬ) ಅಗಸನ ಕಥೆಯಿಂದ ಶುದ್ಧಸಿದ್ಧಾಂತ ಮಾಡುವುದು ಕಷ್ಟ. ಈ ಕಾಲದಲ್ಲಿ ನಮಗೆ ಈ ಮಾತು ರುಚಿಸದು. ಇಂಥ ಟೀಕೆಗೆ ಹೆದರಿ ಹೆಂಡತಿಯನ್ನೂ ಬಿಡುವುದು ನಿರ್ದಯೆ, ಅನ್ಯಾಯ ಎನ್ನುತ್ತೇವೆ. ಆದರೆ ರಾಮಾಯಣದಲ್ಲಿ ಕವಿ ಯಾವ ದೃಷ್ಟಿಯಿಂದ ಈ ಸಂದರ್ಭ ಹೆಣೆದಿದಾನೋ ನಾನು ಹೇಳಲಾರೆ. ನಾವು ಆ ಪಂಚಾಯತಿಯಲ್ಲಿ ಬೀಳಬೇಕಾಗಿಲ್ಲ. ನಾನಂತೂ ಬೀಳುವುದಿಲ್ಲ. ರಾಮಾಯಣದಂಥ ಪುಸ್ತಕಗಳನ್ನು ನಾನು ಈ ದೃಷ್ಟಿಯಿಂದ ಓದುವುದಿಲ್ಲ.

ಹುಡುಗಿಯರೊಂದಿಗೆ ನಾನು ಸಲಿಗೆಯಿಂದಿರುತ್ತೇನೆ. ನನ್ನೀ ಸಲಿಗೆಯಿಂದ ಆಶ್ರಮವಾಸಿಗಳ ಮೇಲೆ ಕೆಟ್ಟ ಪರಿಣಾಮವಾಗುತ್ತಿದ್ದರೆ ನಾನು ಆ ಸಲಿಗೆ ಬಿಡಬೇಕು. ಈ ಸಲಿಗೆ ಸ್ವತಂತ್ರವಾದ ಧರ್ಮವೇನಲ್ಲ. ಸಲಿಗೆಯಿಂದಿದ್ದರೆ ನೀತಿಭಂಗವೂ ಅಲ್ಲ. ಸಲಿಗೆಯಿಲ್ಲದಿರುವುದರಿಂದ ಹುಡುಗಿಯರ ಮನಸಿನ ಮೇಲೆ ಕೆಟ್ಟ ಪರಿಣಾಮವಾದರೆ ಆಶ್ರಮವಾಸಿಗಳನ್ನೊಪ್ಪಿಸಿ ನಾನು ಆ ಸಲಿಗೆ ವಹಿಸುತ್ತೇನೆ. ಆ ಹುಡುಗಿಯರೇ ನನ್ನನ್ನು ಬಿಡದಿದ್ದರೆ ಏನು ಮಾಡಬೇಕೋ ನೋಡುವುದು ನನ್ನ ಕೆಲಸ. ನಾನು ಸಲಿಗೆಯಿಂದಿರುವುದನ್ನು ನೋಡಿ ನೀವು ಅದನ್ನು ಅನುಕರಿಸಬಾರದು. ಅದು ಸ್ವಾಭಾವಿಕವಾಗಬೇಕು. ಇಂದಿನಿಂದ ಸಲಿಗೆಯಾಗಿರುತ್ತೇನೆ ಎಂದು ಕೃತ್ರಿಮರೀತಿಯಿಂದ ಪ್ರಾರಂಭಮಾಡಿದರೆ ಅದು ಭಯಂಕರ.

ಮುಖ್ಯವಾದ ಮಾತಿದು. ನಿರ್ದೋಷ ಅನಿಸುವಂಥ ಸಲಿಗೆಯನ್ನು

ವಿಕಾರವಶನಾಗಿ ಬೆಳೆಸಿದವನು, ತಾನೂ ಬೀಳುತ್ತಾನೆ ಮಂದಿಯನ್ನೂ ಕೆಡವುತ್ತಾನೆ. ನಮ್ಮ ಸಮಾಜದಲ್ಲಿ ಗಂಡುಹೆಣ್ಣಿನ ಸಂಬಂಧ ಸಹಜವಾಗಿಲ್ಲ. ಅದು ಹಾಗಾಗುವ ತನಕ ಎಚ್ಚರದಿಂದ ನಡೆಯುವುದು ಆಗತ್ಯ. ಈ ವಿಷಯದಲ್ಲಿ ಎಲ್ಲರಿಗೂ ಅನ್ವಯಿಸುವ ರಾಜಮಾರ್ಗವಿಲ್ಲ. ನಿನ್ನ ಇರುವಿಕೆಯಲ್ಲಿಯೂ ಬೇಕಾದಷ್ಟು ಅಸಂಸ್ಕಾರಿತೆ ಇದೆ. ನಿನ್ನ ಸಹಜವಾದ ಸ್ವಾಭಾವಿಕ ನಿರ್ದೋಷತೆಯಿಂದ ನೀನು ಉಳಿದಿದ್ದೀಯೆ. ಇದರಿಂದ ನಿನಗೆ ಜಂಬ ಬಂದಿದೆ. ಹಟದಿಂದಲಾದರೂ ಅದನ್ನು ನಡಸುತ್ತಿದ್ದೀಯೆ. ಇದು ನಿನ್ನ ಅವಿಚಾರ, ಇದರಿಂದ ಆಗಬಹುದಾದ ಹಾನಿ ನಿನಗೆ ಈಗ ತಿಳಿಯುವುದಿಲ್ಲ. ಯಾವಾಗಲಾದರೊಮ್ಮೆ ಪಶ್ಚಾತ್ತಾಪ ಪಡಬೇಕಾಗಿ ಬಂದೀತು. ಯಾರಿಗೂ ದುರಭಿಮಾನ ಕಡೆತನಕ ಉಳಿದಿಲ್ಲ. ಲೌಕಿಕ ಮರ್ಯಾದೆ ಕೆಟ್ಟದ್ದೆಂದು ಅದನ್ನು ಮುರಿಯಬಾರದು. ಲೋಕಮತ ಎಂದರೇನು, ಈಗಾದರೂ ತಿಳಿಯಿತೋ?

೧೮–೮–೩೨

**ಬಾಪೂನ ಆಶೀರ್ವಾದ.**

**೪೬**

ನಿನ್ನ ಕಾಗದ. ನನ್ನಿಂದ ಶಾಬಾಸ್ ಅನಿಸಿಕೊಳ್ಳಬೇಕೆಂದು ಸ್ತೋತ್ರಾರ್ಹವಾದ ಗುಣಗಳನ್ನು ಪ್ರಕಟಮಾಡುತ್ತಿದ್ದೀಯೋ ಹೇಗೆ? ಹಾಗಿದ್ದರೆ ಶಬಾಸಿಗೇನೂ ಬೆಲೆ ಉಳಿಯಲಾರದು. ....ಲ್ಲಿ ಇದ್ದಾಗ ಕೂಡ....ರ ಗ್ಲಾನಿಯನ್ನು ದೂರ ಮಾಡಲಾರದೆ ಹೋದೆ. ಇದು ವಿಚಿತ್ರ. ರಾಖೀ ಹುಣ್ಣಿಮೆಯ ದಿನ ಆಕೆ ರಕ್ಷಾಬಂಧನವನ್ನಂತೂ ಮಾಡಿರಲಿಕ್ಕೇಬೇಕು. ದಾರ ಕಟ್ಟಿದರೆ ತೀರಿತೇನು? ....ರ ದುಃಖದ ಮೂಲವನ್ನು ಅರಿತುಕೊಂಡು ನಿವಾರಣೆ ಮಾಡುವದು....ರಿಗೆ ಅಸಾಧ್ಯವಲ್ಲ....ರು ತಮ್ಮ ಹೆಂಡತಿಯನ್ನು ಪೂಜಿಸುತ್ತಾ ಇದ್ದರು. ಗೃಹಸ್ಥರಾಗಿದ್ದರೂ ಇಬ್ಬರೂ ಬ್ರಹ್ಮಚರ್ಯ ಪಾಲನೆ ಮಾಡುತ್ತಿದ್ದರು....ರು ಹೋದ ಕೂಡಲೆ ಅವರಿಗೆ ಬಹಳ ನೋವಾಯಿತು. ....ನಿಗೆ ಮದುವೆ

ಮಾಡಿಕೊಳ್ಳುವ ಮನಸಿರಬಹುದು. ತನ್ನ ಸ್ಥಿತಿಯನ್ನೇ ತಾನು ತಿಳಿಯ ಲಾರದವನು ಅವನು. ಅವನಂತೆ ಭಾವನಾಪ್ರಧಾನಳಾದ ಹೆಂಡತಿಯೇ ಅವನಿಗೆಬೇಕು. ಅಂಥ ಹೆಂಡತಿ ಸಿಗದಿದ್ದರೆ ಕಡೆಗೆ ಅಂಥ ತಂಗಿಯಾದರೂ ಒಬ್ಬಳು ಬೇಕು; ದೊರೆತರೆ ಅವನ ಮನಸು ಅರಳೀತು. ....ಪೂರ್ಣ ಬ್ರಹ್ಮಚಾರಿಣಿಯಾಗಿದ್ದಾಳೆಂದು ನನಗನಿಸುತ್ತದೆ. ಅವಳು....ಳ ಗೆಳತಿ. ಅವಳೂ ಭಾವನೆಯ ಜೀವ. ನೀನು....ನ ಖಿನ್ನತೆಯ ವಿಷಯ ಬರೆವೆ ಎಂದು ಇಷ್ಟೆಲ್ಲ ಬರೆದೆ. ....ಳನ್ನು ಸರಿಯಾಗಿ ತಿಳಿದುಕೊಂಡಿದೇನೆ; ಆ ಕೆಲಸ ಅವಳಿಗೆ ಮೀರಿದ್ದಲ್ಲ ಎಂದು ನಿನಗನಿಸಿದರೆ ಈ ಕಾಗದ ಅವ ಳಿಗೆ ಕಳಿಸು. ಇದು ಅವಳಿಗೆ ಸಾಧ್ಯವಲ್ಲ ಎನಿಸಿದರೆ ಈ ಮಾತು ಮರೆತು ಬಿಡು. ....ನಿಗೆ ಶುದ್ಧ ಪ್ರೇಮದ ಹಸಿವು. ಆದರೆ ಅವನಿಗೆ ಇಷ್ಟಾನಿಷ್ಟ ಪ್ರಿಯಾಪ್ರಿಯ ಬಹಳ. ಅವನಿಗೆ ಪ್ರೀಯವಾದವರು ಕೆಲವೇ ಜನ. ಆದ್ದರಿಂದ ಮನಸಿನಲ್ಲೇ ಕುದಿಯುತ್ತಾನೆ. ಇಂಥವನಿಗೆ ಹೆಂಡತಿಯ ಅಗತ್ಯ ಕಡಮೆ. ವಿಕಾರ ರಹಿತಳಾದ ಸೋದರಿಬೇಕು. ಅಂಥವಳು ಸಿಕ್ಕರೆ ಸುಗಮವಾದೀತು. ನಮ್ಮ ಹೆಂಗಸರು ಇಂಥ ಗುಣವನ್ನು ದೊರಕಿಸಿ ಕೊಳ್ಳರು. ಅವರಿಗೆ ಹೆಂಡತಿಯಾಗುವುದೇ ಗೊತ್ತು, ಸೋದರಿಯಾಗ ಲರಿಯರು. ತಂಗಿಯಾಗಲು ವಿಶೇಷವಾದ ತ್ಯಾಗವೃತ್ತಿಬೇಕು. ಹೆಂಡತಿ ಯಾಗುವಂಥವಳು ಹದಿನಾರಾಣೆ ತಂಗಿಯಾಗಲಾರಳು. ಇದು ಸ್ವಯಂ ಸಿದ್ಧವಾದ ವಿಷಯ. ನಿಜವಾದ ತಂಗಿ ಇಡೀ ಜಗತ್ತಿಗೇ ತಂಗಿಯಾದಾಳು. ಹೆಂಡತಿ ಒಬ್ಬ ಗಂಡುಸಿಗೆ ಮಾತ್ರವೇ ತನ್ನನ್ನು ತಾನು ಅರ್ಪಣೆ ಮಾಡು ತ್ತಾಳೆ. ಪತ್ನೀ ಗುಣವೂ ಅಗತ್ಯವೇ, ಅದನ್ನು ಯಾರೂ ಕಲಿಸಬೇಕಾ ಗಿಲ್ಲ. ಅದರಲ್ಲಿ ವಿಕಾರಶಾಂತಿಗೆ ಅವಕಾಶವಿದೆ. ಜಗತ್ತಿಗೆ ತಂಗಿಯಾಗಿ ಬಾಳುವುದು ಮಾತ್ರ ಬಹಳ ಕಷ್ಟ. ಉತ್ಕೃಷ್ಟ ಸೇವಾಭಾವವುಳ್ಳ ಸ್ವಭಾ ವಸಿದ್ಧ ಬ್ರಹ್ಮಚಾರಿಣಿ ಮಾತ್ರವೇ ಜಗತ್ತಿನ ಸೋದರಿಯಾಗಬಲ್ಲಳು. ನೀನು ಅಂಥ ಆದರ್ಶ ಸೋದರಿಯಾಗಬೇಕೆಂದು ನನ್ನ ಆಸೆ. ಕೆಲಸ ಕಷ್ಟ ವಾದದ್ದೇ. ಆದರೂ ದೇವರ ಚಿತ್ತದಲ್ಲಿದ್ದರೆ ಆದೀತು.

ಜನ್ಮಾಷ್ಟಮಿಯ ದಿನ ನೀನು ಆಶ್ರಮಕ್ಕೆ ಬಂದದು ಒಳ್ಳೆಯದು.

ನೋಡು, ಸಿಟ್ಟನ್ನು ಗೆಲ್ಲಬೇಕು. ....ನಿನ್ನ ಜೊತೆಗೆ ಬರಲು ಸಿದ್ಧನಾಗ ಲಿಲ್ಲ; ಗೊತ್ತೇನು? ಅವನ ಮೇಲೆ ಸಿಟ್ಟಾಗಬೇಡ. ಅವನಿನ್ನೂ ಚಿಕ್ಕವನು; ನೀನಲ್ಲ. ಅವನನ್ನು ಒಲಿಸುವುದೇ ನಿನ್ನ ಗೆಲವು, ಇಲ್ಲದಿದ್ದರೆ ಸೋಲು.

ಸುಸಂಸ್ಕಾರೀ ಮಾತಾಪಿತೃಗಳ ಪರೀಕ್ಷೆ ಯಾರು ಮಾಡಬೇಕು? ಗರ್ಭನಿಂತಾಗ ತಂದೆತಾಯಿಗಳ ಸ್ಥಿತಿ ಹೇಗಿತ್ತೋ ಯಾರು ಹೇಳಬಲ್ಲರು? ಅಂತೇ ಒಳ್ಳೆಯದರ ಫಲ ಒಳಿತು. ನಿರಪವಾದ ನಿಯಮ ಇದು. ಅದಕ್ಕೆ ಹೊಂದಿಕೊಂಡಿರುವುದರಲ್ಲೇ ತಥ್ಯವಿದೆ. ಪ್ರತಿಯೊಂದು ಸಂದರ್ಭಕ್ಕೂ ಹೊಂದಿಸಿ ಎಲ್ಲ ವ್ಯಕ್ತಿಗಳಿಗೂ ಅನ್ವಯಿಸಲು ಬಾರದಿದ್ದರೆ ಈ ನಿಯಮ ತಪ್ಪಲ್ಲ; ತಪ್ಪು ನಮ್ಮ ಅಜ್ಞಾನದ್ದು.

ದೇವರನ್ನು ಒಪ್ಪಿದರೂ ಅದೃಷ್ಟ ಸುಳ್ಳಾಗದು. ಅದೃಷ್ಟ ಪೂರ್ವ ಕರ್ಮದ ಫಲ.

ವೇಶ್ಯೆಯರನ್ನು ಉದ್ಧರಿಸಬೇಕೆಂದರೆ ಪುರುಷರು ತಮ್ಮ ಪಶುತ್ವ ವನ್ನು ಬಿಡಬೇಕು. ಗಂಡಸರು ಪಶುಗಳಾಗಿರುವವರೆಗೆ ವೇಶ್ಯೆಯರು ಇರುವವರೇ. ಅವರು ತಮ್ಮ ವೃತ್ತಿಯನ್ನು ಬಿಟ್ಟರೆ ಕುಲೀನರಾದ ಗಂಡಸರು ಅವರ ಕೈಹಿಡಿಯಲು ಸಿದ್ಧರಾಗಿರಬೇಕು. ಒಮ್ಮೆ ವೇಶ್ಯೆ ಯಾದವಳು ಕಾಲಕಾಲಕ್ಕೂ ವೇಶ್ಯೆಯೇ ಎಂದು ನಿಯಮವಲ್ಲ.

ಸೇನೆಯ ಸಿಪಾಯಿಗಳಿಗಾಗಿ ಹುಡುಗಿಯರನ್ನು ಎತ್ತಿಕೊಂಡು ಹೋಗುತ್ತಾರೆಂಬ ಮಾತು ನಿಜವೆಂದನಿಸುವುದಿಲ್ಲ. ಸುವ್ಯವಸ್ಥಿತ ರಾಜ್ಯ ದಲ್ಲಿ ಹೀಗೆಂದಿಗೂ ಆಗಲಾರದು.

ಯರವಡಾ ಮಂದಿರ, ೨೬-೮-೩೨

**ಬಾಪೂನ ಆಶೀರ್ವಾದ.**

**೪೭**

ನಿನಗೆ ಈಗ ಎಂಥ ಹೊಸ ವಿಶೇಷಣ ಕೊಡಬೇಕೋ ತೋರದು. ನೀನು ಕೇಳಿದ್ದನ್ನು ಕೊಡುತ್ತೇನೆ.

ಆ ಇಬ್ಬರು ಹೆಂಗಸರು ಬಂದರೆಂದು ಸುಶಿಕ್ಷಿತ ಸ್ತ್ರೀಯರು ಆಶ್ರಮಕ್ಕೆ ಬರತೊಡಗಿದರು ಎನ್ನಲು ಬರುವಂತಿಲ್ಲ. ಅಪ್ಪಿತಪ್ಪಿ

ಒಬ್ಬೊಬ್ಬರು ಬಂದರೂ ಬಂದಾರು. ಇದುವರೆಗೆ ಬಂದವರಲ್ಲಿ ಯಾರನ್ನೂ ನಿಲ್ಲಿಸಿಕೊಳ್ಳಲಾಗಲಿಲ್ಲ. ನೀನೂ ಕಲಿತವಳು, ನಿನ್ನನ್ನು ಆಶ್ರಮದಲ್ಲಿ ಉಳಿಸಿಕೊಂಡಿದೇವೆ ಎಂದು ತಿಳಿದರೆ ಆ ಮಾತು ಬೇರೆ. ಇದು ನಿಯಮಕ್ಕೆ ಅಪವಾದ. ಒಂದು ಕೋಗಿಲೆ ಕೂಗಿದರೆ ವಸಂತ ಬಂದಂತಾಯಿತೇ?

......ನ ವಿಷಯ ಅಯ್ಯೋ, ಪಾಪ! ಎನಿಸುತ್ತದೆ. ಅವನನ್ನು ತರಗತಿಯಿಂದ ಕಳಿಸಿದ್ದು ಒಳಿತಾಯಿತು. ಆದರೆ ಅವನನ್ನು ಮರೆತು ಬಿಡಬೇಡ. ಅವನ ಮೇಲೊಂದು ಕಣ್ಣಿಟ್ಟು ಅವನನ್ನು ದಾರಿಗೆ ತರುವ ಪ್ರಯತ್ನ ಮಾಡು. ......ನ ವಿಷಯದಲ್ಲಿ ನಿನಗೆ ತೊಂದರೆಯಿದೆ; ನನಗೆ ಗೊತ್ತು. ನಿನಗೆ ಧೈರ್ಯ ಔದಾರ್ಯಗಳಿದ್ದರೆ ಅವನ ತಾಯಿತಂದೆಗಳೊಡನೆ ಮಾತಾಡಿ ಅವನಿಗೆ ಹಿತವಾಗುವಂತೆ ಏನಾದರೂ ಹಾದಿ ತೆಗೆ.

ನಮ್ಮ ದಾರಿಯಲ್ಲಿ ನಾವೇ ಮುಳ್ಳು ಚೆಲ್ಲಿ, ಚುಚ್ಚುತ್ತವೆ ಎಂದು ದೂರುತ್ತೇವೆ. ನಮ್ಮ ಬಲವನ್ನೇ ನಾವು ನಂಬಿದರೆ ಯಾವುದೂ ಸಫಲವಾಗದು. ದೇವರ ಬಲವನ್ನು ನಂಬಿದರೆ ಎಂಥ ಕಗ್ಗತ್ತಲೆಯಲ್ಲೂ ಬೆಳಕು ಕಂಡೀತು. 'ನನ್ನಲ್ಲಿ ಪ್ರೇಮವಿದ್ದರಷ್ಟೆ' ಎಂದು ನೀನು ಬೆನ್ನು ತಿರುಗಿಸಿದರೆ ನಾನು ಹೇಳಿದ್ದೆಲ್ಲ ನಿರರ್ಥಕ. ನಮ್ಮಲ್ಲಿ ಪ್ರೇಮವಿದೆ ಎಂದರೆ ಎಷ್ಟೋ ಜನರನ್ನು ನೀವು ಗೆದ್ದುಕೊಂಡಿಲ್ಲವಲ್ಲ; ನನಗೆ ಹೇಳುವ ಅಧಿಕಾರವೇ ನಿಮಗಿಲ್ಲ ಎಂದು ನಿನ್ನ ಹೃದಯದ ಬಾಗಿಲು ಮುಚ್ಚಿದರೆ ನಾನು ಅಸಹಾಯನಾಗುತ್ತೇನೆ. ನನ್ನಲ್ಲಿರುವ ಅಪೂರ್ಣತೆ ನಾನೊಪ್ಪಿಕೊಳ್ಳುತ್ತೇನೆ. ನೀನೇಕೆ ಅವನ್ನು ಅನುಕರಿಸುತ್ತೀ? ನನ್ನ ಅನುಭವದಿಂದ ನಾನು ಯಾವುದನ್ನು ಕೊಡುತ್ತೇನೋ ಅದನ್ನು ಉಪಯೋಗ ಮಾಡಿಕೋ. ಜೊತೆಗಾರರ ದೋಷಗಳನ್ನೂ ಸಂಗ್ರಹಿಸಬಾರದು, ಅವನ್ನು ತಪ್ಪಿಸಬೇಕು. ಅವರ ಗುಣಗಳನ್ನು ಮಾತ್ರ ಕಲಿಯಬೇಕು. ನಿನ್ನಂತೆ ಕೈಲಾಗದವನ ಹಾಗೆ ನಾನು ಕೂಡುವುದಿಲ್ಲ. ಕಠೋರತಮ ಹೃದಯವನ್ನು ಕೂಡ ಕರಗಿಸಬಲ್ಲೆನೆಂಬ ವಿಶ್ವಾಸವಿದೆ. ಅಂತೇ ಸದಾ ಪ್ರಯತ್ನಶೀಲನಾಗಿದೇನೆ.

ಭೋಜನಗೃಹದಲ್ಲಿ ವರ್ತಮಾನ ಪತ್ರಿಕೆ ಓದಿ ತೋರಿಸುತ್ತಿದ್ದರೆ,

ವಿನೋದ ಮಾಡುತ್ತಿದ್ದರೆ ಅದು ಯೋಗ್ಯವಲ್ಲ. ಭೋಜನಗೃಹದಲ್ಲಿ ಮೌನವಾಗಿರಬೇಕು. ಅಲ್ಲೇನು ಓದಿತೋರಿಸುವುದು?

ಓದಿದರೂ-ಕಡೆಗೆ ಭೋಜನಗೃಹದಲ್ಲಿ ಯಾರಾದರೂ-ಗಂಭೀರವಾಗಿರಬೇಕು. ಆದರಲ್ಲಿ ಇಷ್ಟು ಮಾತ್ರ ತಿದ್ದುಪಡೆಯಾಗಲಿ. ಭೋಜನಗೃಹದಲ್ಲಿ ನೀನೇ ವಿನೋದ, ಅಣಕ ಮಾಡಿದರೆ ಇನ್ನು ಹುಡುಗರೆಷ್ಟು ಮಾಡುತ್ತಾರೋ? ಅವರೆಲ್ಲರೂ ನಿನ್ನ ಹಾಗೆಯೇ ಮಾಡಿದರೆ ಅದು ಭೋಜನಗೃಹದ ಬದಲು ಮಂಗನಮಂತ ಆದೀತು. ಅದರಿಂದ ಶಿಸ್ತು ಕೆಡುತ್ತದೆ. ಇದೆಲ್ಲ Smart little girl ನ-(ಚುರಕಾದ ಚಿಕ್ಕ ಹುಡುಗಿಯ) Smart (ಚುರುಕಾದ) ತಲೆಯೊಳಗೆ ಹೋಯಿತೇ? ಅಥವಾ ಆಶ್ರಮದಿಂದ Smartness (ಚುರುಕತನ) ಎಲ್ಲ ಕಳುವಾಗಿ ಹೋಯಿತೋ ಏನು? ಈ ಹೊತ್ತು ಹೆಚ್ಚು ಬರೆಯುವುದಿಲ್ಲ.

ಯರವಡಾ ಮಂದಿರ, ೩೧-೭-೩೨

**ಬಾಪೂನ ಆಶೀರ್ವಾದ.**

**೪೮**

ನನ್ನಲ್ಲಿ ನಿನಗೆ ನಂಬಿಗೆಯಿದ್ದರೆ ನನ್ನ ಸ್ವಭಾವದ ಪುಸ್ತಕವನ್ನೆ ತೆರೆದಿಡುತ್ತೇನೆ. ನನ್ನನ್ನು ಪ್ರೀತಿಯಿಂದ ಭಜಿಸಿದವರಿಗೆ ಬುದ್ಧಿಯೋಗವನ್ನು ಕೊಡುತ್ತೇನೆ ಎಂಬದು ಸತ್ಯನಾರಾಯಣನ ವಚನ. ಈ ಹಾದಿಯಲ್ಲಿ ನನ್ನ ಸ್ವಭಾವ ಪುಸ್ತಕದ ಎಲ್ಲ ಪುಟಗಳೂ ತೆರೆದುಬಿದ್ದಿವೆ. ಪುಸ್ತಕ ಇದಿರಿಗೇ ಇದ್ದರೂ ಅದನ್ನು ಓದಲು ಬಾರದಿದ್ದರೆ, ಓದುವ ಪ್ರಯಾಸ ಬೇಡದಿದ್ದರೆ ತಪ್ಪು ಯಾರದು? ಇದು ವಿಷಯಾಂತರವಾಯಿತು. ಆದರೂ ಈ ಪುಸ್ತಕ ಓದುವ ರೀತಿಯನ್ನು ನಿನಗೆ ತೋರಿಸಿದೆ. ನನಗಿದು ಗೊತ್ತೇ ಇತ್ತು ಎನ್ನಬಹುದು ನೀನು. ಹಾಗೆಂದರೆ ನಿನಗೆ ನಾನು 'ಸರ್ವಜ್ಞೆ' ಯೆಂದಿಟ್ಟ ಹೆಸರು ಸಾರ್ಥಕ ಎನ್ನಬೇಕು.

. . . . . .ಬೇನ್‌ಗೆ ಕಾಯಿಲೆಯಾಗಿದೆ; ನಿನಗೆ ಗೊತ್ತೇ? ಆಕೆಯ ಸಂಗಡ ಸ್ವಲ್ಪ ಮಾತಾದರೂ ಆಡು. ನಮ್ಮ ಕಲ್ಪನೆಯಿಂದ ನಮಗಾಗುವ ಭಯ ನಿಜವಾಗಿ ಇರುವುದಿಲ್ಲ. 'ಇಚ್ಛೆ ಭೂತ, ಶಂಕೆ ಡಾಕಿನಿ' ಎಂಬುದು ಹದಿನಾರಾಣೆ ಸತ್ಯ.

ನಿನ್ನ ವಿಷಯವಾಗಿ......ನಿಗೆ ನಾನೇನು ಬರೆದ್ದೀನೆ? ಇಲ್ಲಿನ ತನಕ ನಿನ್ನ ಬ್ರಹ್ಮಚರ್ಯದ ಬಗ್ಗೆ ನನಗೆ ತಿಲಮಾತ್ರವೂ ಸಂಶಯವಿಲ್ಲ. ನಾಳೆ ಏನಾದೀತೋ? ನಾಳಿನದು ನಿನಗೆ ಗೊತ್ತಿದ್ದರೆ ನಾರದನಿಗಿಂತ, ಶ್ರೀರಾಮನಿಗಿಂತ ನೀನು ದೊಡ್ಡವಳೆನ್ನಬೇಕು. ಹೀಗಿದ್ದರೂ ನಿನ್ನ ಸಂಕಲ್ಪಕ್ಕೆ ನಾನು ಸದಾ ಬೆಂಬಲಕೊಟ್ಟಿದೇನೆ. ಯಾರಾದರೂ ನಿನ್ನನ್ನು ಚಟ್ಟನೆ ಮೋಸಗೊಳಿಸಬಲ್ಲರೆಂದು ನಾನು ತಿಳಿದಿಲ್ಲ. ಆದರೆ ನಿನ್ನಷ್ಟೇ ದೃಢಚಿತ್ತರಾದ ಹೆಂಗಸರು ಮದುವೆ ಮಾಡಿಕೊಂಡುದನ್ನು ನಾನು ಬಲ್ಲೆ. ಅದರಲ್ಲಿ ಅವರದಾದರೂ ಏನು ತಪ್ಪು? ಅಂತೇ, ಸದ್ಯ ನಿನ್ನ ವಿಷಯದಲ್ಲಿಯೂ ಅಂಥ ಆಸೆಯಿಟ್ಟುಕೊಳ್ಳುತ್ತೇನೆ. ಆಶೀರ್ವಾದ ಮಾಡುತ್ತೇನೆ. ನನ್ನ ಕೈಲಾದ ಸಹಾಯ ಮಾಡುತ್ತೇನೆ. ಸಾಧ್ಯವಿದ್ದಷ್ಟು ನಿಟೂ ಕೊಡುತ್ತೇನೆ. ಕಟ್ಟಕಡೆಗೆ ನೀನುಂಟು, ದೇವರುಂಟು. ನಿನ್ನ ಮನಸಿಗೆ ಏನು ಅನಿಸುತ್ತದೆಯೋ ಅದನ್ನೇ ಬರೆ. ನನಗೆ ಅಂಥ ಕಾಗದಗಳೇ ಬೇಕು. ಕೃತ್ರಿಮಳಾದರೆ ನನ್ನ ಕಣ್ಣಿಗೆ ನೀನು ಕೆಲಸಕ್ಕೆ ಬಾರದವಳು. ನಿನ್ನ ಅಂತರಂಗದಲ್ಲಿ ಕೆಲವು ಕಗ್ಗಂಟು ಇವೆ. ಕಣ್ಣಿಗೆ ಬಿದ್ದಾಗಲೆಲ್ಲ ಅವನ್ನು ನಾನು ಬಿಡಿಸಲು ಯತ್ನಮಾಡುತ್ತಿದ್ದೇನೆ. ನಾನು ತಾನೆ ಎಷ್ಟು ಬಿಡಿಸಬಲ್ಲೆ? ಈ ಕೆಲಸ ಮನುಷ್ಯಮಾತ್ರನಿಗೆ ಸಾಧ್ಯವಲ್ಲ. ದೇವರು ನನಗೆಷ್ಟು ಶಕ್ತಿಕೊಡುತ್ತಾನೋ ಅಷ್ಟು ಮಟ್ಟಿಗೆ ಮಾತ್ರ, ಅದೂ ನಿಮಿತ್ತಮಾತ್ರನಾಗಿ, ನಾನು ಮಾಡಬಹುದು. ಅದರಲ್ಲಿ ನನ್ನ ಸ್ವಾರ್ಥವೂ ಇದೆ. ನಿನ್ನಿಂದ ನನ್ನ ಕೆಲಸ ಎಷ್ಟೋ ಆಗಬೇಕಾಗಿದೆ. ನಿನಗೆ ನಾನು ನೀಡಿದ ದಾನ ವ್ಯರ್ಥವಾಗುತ್ತಿದ್ದರೆ ನಾನು ಇಷ್ಟು ಉದ್ದುದ್ದ ಕಾಗದ ಬರೆಯುವ ಶ್ರಮ ಪಡುತ್ತಿರಲಿಲ್ಲ.

ಒಂದು ಸಮಾಜದ್ದಾಗಲಿ, ಒಬ್ಬ ವ್ಯಕ್ತಿಯದಾಗಲಿ ಅವನತಿಯ ನಿಜವಾದ ಕಾರಣ ಇದು ಎಂದು ಕಂಡು ಹಿಡಿದುದನ್ನು ನಾನು ಕೇಳಿಲ್ಲ. ಅನುಮಾನ ಕಟ್ಟಬಹುದು; ತಾತ್ಪೂರ್ತಿಕ ಕಾರಣವೂ ದೊರೆಯಬಹುದು. ಆದರೆ ಅದೊಂದೇ ಕಾರಣ ಎಂದು ಹೇಳಲು ಬಾರದು. ಸಾಧಾರಣವಾಗಿ ಹೀಗೆ ಹೇಳಬಹುದು: ಅವನತಿಯ ಮೂಲ ಧಾರ್ಮಿಕತೆಯ ಅಭಾವ.

ಪಾರತಂತ್ರ್ಯವೇ ಮೂಲಕಾರಣವೆಂದಿಗೂ ಅಲ್ಲ. ಯಾಕೆಂದರೆ, ಅದು ಸ್ವತಃ ಇತರ ಕಾರಣಗಳ, ದೌರ್ಬಲ್ಯಗಳ ಪರಿಣಾಮ.

ಸದೋದಿತ ಧಾರ್ಮಿಕ ಪದ್ಧತಿಗನುಸಾರವಾಗಿ ಪರಸ್ಪರ ಸಹಾಯ ಮಾಡುವುದು ನೆರೆಹೊರೆಯ ಲಕ್ಷಣ.

ಅಹಂಕಾರದ ಬೀಜ ನಾಶವಾಗಲು ಶೂನ್ಯತೆಯ ಅನುಭವಬೇಕು. ಒಂದು ಗಳಿಗೆಯ ಹೊತ್ತು ತನ್ನೊಳಗೆ ತಾನೆ ಆಳವಾಗಿ ಇಳಿದು ನೋಡಿದರೆ ತಾನು ಅತ್ಯಲ್ಪನೆಂಬ ಜ್ಞಾನ ಬರುತ್ತದೆ. ಪೃಥ್ವಿಯ ಇದಿರು ಜಂತು ಹೇಗೆ ಸಣ್ಣದೋ ಹಾಗೆ ಸಾವಿರಾರು ಪೃಥ್ವಿಗಳ ಈ ವಿಶ್ವದಲ್ಲಿ ಮನುಷ್ಯ ಪ್ರಾಣಿ ಎಷ್ಟು ಕ್ಷುದ್ರ! ಬುದ್ಧಿಯಿದ್ದ ಮಾತ್ರಕ್ಕೆ ಭೇದವೇನೂ ಇಲ್ಲ. ತನ್ನ ಅಲ್ಪತೆಯ ಅರಿವೇ ಅವನ ಶ್ರೇಷ್ಠತೆ. ಈ ಅನುಭವದಿಂದ ಬೇರೆ ಜ್ಞಾನೋದಯವಾಗುತ್ತದೆ: ತನ್ನ ಸ್ವರೂಪ ತುಚ್ಛವಾದರೂ ಪರಮಾತ್ಮನ ಅಂಶ ಅದು; ಎಷ್ಟೇ ತುಚ್ಛವಾದ ಅಂಶವಾದರೂ ಪರಮಾತ್ಮನಲ್ಲಿ ವಿಲೀನವಾಗಬಲ್ಲದು. ಅಂತೇ ಅವನು ಪರಮಾತ್ಮ ಸ್ವರೂಪಿ; ಈ ಅಣುವಿನಲ್ಲಿಯೂ ಆ ಶಕ್ತಿ ತುಂಬಿದೆ.

ಮಾಯಾವಾದವನ್ನು ನನ್ನ ರೀತಿಯಲ್ಲಿ ನಾನು ಒಪ್ಪುತ್ತೇನೆ. ಇಡೀ ಕಾಲಚಕ್ರದಲ್ಲಿ ಜಗತ್ತು ಮಾಯೆ, ನಿಜ; ಆದರೆ, ಯಾವ ಗಳಿಗೆಯಲ್ಲಿ ಅದು ಇದೆಯೋ ಆ ಗಳಿಗೆಯಲ್ಲಿ ಅದು ಇದ್ದೇ ಇದೆ. ನಾನು ಅನೇಕಾಂತವಾದವನ್ನೂ ಒಪ್ಪುತ್ತೇನೆ.

ನಮಗೆ ನಿಜವಾಗಿಯೂ ಪ್ರತ್ಯಕ್ಷವಾಗಿ ಕಾಣುತ್ತಿರುವ ಒಂದು ವಸ್ತು ಮೃತ್ಯು. ಆದರೂ ಈ ಅನಿವಾರ್ಯ ಪ್ರತ್ಯಕ್ಷ ವಸ್ತುವಿಗೆ ನಾವು ಹೆದರಿಕೊಳ್ಳುತ್ತೇವೆ; ಇದಲ್ಲವೆ ಆಶ್ಚರ್ಯ! ಇದೇ ಮಮತೆ, ನಾಸ್ತಿಕತೆ. ಇದನ್ನು ದಾಟಿ ಹೋಗುವ ಧರ್ಮ ಮನುಷ್ಯನೊಬ್ಬನಿಗೇ ಸಿಕ್ಕಿದೆ.

ಸತ್ತ ಮೇಲೆಯೂ ಪಾಪಪುಣ್ಯ ಜೀವಿಯ ಜೊತೆಯಲ್ಲೇ. ಸೂಕ್ಷ್ಮಶರೀರದಲ್ಲೇ ಇರಲಿ, ಸ್ಥೂಲಶರೀರದಲ್ಲೇ ಇರಲಿ ಜೀವ ಆ ಪಾಪ ಪುಣ್ಯವನ್ನು ಭೋಗಿಸಲೇಬೇಕು.

ಯರವಡಾ ಮಂದಿರ, ೧೧-೯-೩೨

**ಬಾಪೂನ ಆಶೀರ್ವಾದ.**

## ೪೯

ನಿನ್ನ ಕಾಗದ ಬಂತು. ಎಲ್ಲರ ಸಮಾಚಾರವನ್ನೂ ಚೆನ್ನಾಗಿ ಬರೆದಿದ್ದೀಯೆ. .....ಳ ವಿಷಯ ಕಷ್ಟ. ನಿನ್ನ ಮೇಲೆ ಆಕೆಗೆ ನಂಬಿಗೆ ಯಿದ್ದರೆ ಏನಾದರೂ ಮಾಡಲು ಸಾಧ್ಯವಿದ್ದರೆ ನೋಡು. ಆಕೆಯದು ಭೋಳೇಸ್ವಭಾವ. ಆಕೆಯ ಉದ್ದೇಶ ಒಳ್ಳೆಯದು; ಮನಸ್ಸು ವಿಹ್ವಲ, ಅವ್ಯವಸ್ಥಿತ. ಪ್ರೀತಿಯಿಂದ ಏನಾದರೂ ಸಾಧ್ಯವಾದರೆ ನೋಡು.

......ಕ್ಷಮೆ ಬೇಡಿದ್ದು ಒಳಿತು. ಅವನನ್ನು ಹತ್ತಿರ ಕರೆದು ಕೊಳ್ಳುವುದು ಸಾಧ್ಯವಾದರೆ ಮಾಡು. ಒಳ್ಳೇ ಚುರುಕು; ನಾ ಬಲ್ಲೆ. ಅವನ ಬುದ್ಧಿ ಒಳ್ಳೆಯದಕ್ಕೆ ಉಪಯೋಗವಾದರೆ ಎಷ್ಟು ಚಲೋ!

ಆಶ್ರಮದ ಹಣ ಯಾರಿಗಾಗಿ ವೆಚ್ಚವಾಗುವುದು ಯೋಗ್ಯವೋ ಅವರಿಗಾಗಿಯೇ ಅದು ವೆಚ್ಚವಾಗುತ್ತಿದೆ; ಅವರು ಯಾರೇ ಇರಲಿ. ಟೀಕೆಗೇನು, ಬೇಕಾದುದರ ಟೀಕೆ ಮಾಡಬಹುದು. ತಪ್ಪು ಇದ್ದಾವು. ಆದರೆ ಆಶ್ರಮದ ಉದ್ದೇಶ ತಟಸ್ಥವಾಗಿ ಕೆಲಸ ಮಾಡುವುದು.

ಆಶ್ರಮದ ಕಾಸುಕಾಸಿನ ಲೆಕ್ಕವನ್ನೂ ನೋಡುವ ಅಧಿಕಾರ ಜನರಿಗಿದೆ. ಆಶ್ರಮ ಖಾಸಗೀ ಸಂಸ್ಥೆಯಲ್ಲ. ಅದರ ಆದಾಯವೇ ಅದರ ವ್ಯಯದ ಮಿತಿ. ಆಶ್ರಮಕ್ಕೆ ಒಂದು ಕವಡೆಯೂ ಇರದಿದ್ದರೂ ನಡೆದೀತು. ಕೋಟಿಹಣವಾದರೂ ವೆಚ್ಚವಾದೀತು. ನಂಬಿಗೆಯಿರುವ ತನಕ ಜನರೂ ಹಣಕೊಟ್ಟಾರು. ಸಂಸ್ಥೆಯನ್ನು ದೇವರು ನಡೆಸುತ್ತಾ ಇದ್ದಾನೆ. ಕೊಡುವ ದಾನಿಗಳಿಗೆ ಪ್ರೇರಕ ಅವನೇ.

ಯಾರೇ ಆಶ್ರಮ ಬಿಟ್ಟು ಹೋಗಬೇಕಾದರೂ ಅಲ್ಲಿನ ಕಾರ್ಯ ದರ್ಶಿಗಳ ಅಪ್ಪಣೆ ಪಡೆಯಬೇಕು.

ಯರವಡಾ ಮಂದಿರ, ೧೫-೧೦-೩೨

**ಬಾಪೂನ ಆಶೀರ್ವಾದ.**

## ೫೦

ನನಗೆ ಭಾರ ಬಹಳವಾಗಿದೆ. ಆಶ್ರಮಕ್ಕೆ ಇಷ್ಟು ದೀರ್ಘಪತ್ರ ಬರೆಯಲಾದೀತೋ ಇಲ್ಲವೋ ಅನುಮಾನವಾಗುತ್ತಿದೆ. ಇನ್ನು ಮುಂದೆ

ಉದ್ದುದ್ದ ಕಾಗದಗಳನ್ನು ವರ್ತಮಾನಪತ್ರಿಕೆಗಳಲ್ಲಿ ಓದಿದಾಗ ನಿನಗೆ ಸಂತೋಷವಾದೀತು.

ದೀವಳಿಗೆ ಹಬ್ಬದ ವರ್ಣನೆ ಓದಿ ಅಲ್ಲಿಗೆ ಹಾರಿ ಬರಲೆ ಎನಿಸಿತು. ನೋಡುತ್ತೇನೆ, ಸುತ್ತಲೂ ಪಂಜರ, ಎಲ್ಲಾ ಬಂಧನ. ರೆಕ್ಕೆ ಫಳಫಳ ಮಾಡಿ ಸುಮ್ಮನಾದೆ.

ನಿನ್ನ ಜವಾಬದಾರಿ ಬೆಳೆಯುತ್ತಾ ಇದೆ, ನಿಜ. ದೇವರು ಎಲ್ಲಾ ಸವರಿಸಿಯಾನು. ನೀನು ಆತ್ಮವಿಶ್ವಾಸ ಕಳೆದುಕೊಂಡು ಕೂಡಬೇಡ.

ಬೆಣ್ಣೆ ತಿನ್ನುವುದನ್ನೂ ಹೆಚ್ಚು ಮಾಡಿ ನಿನ್ನ ಆರೋಗ್ಯ ಚೆನ್ನಾಗಿ ಮಾಡಿಕೊಂಡರೆ ಅದೇ ಅಗ್ಗವಾದ ಔಷಧ.

ದೃಢಪ್ರಯತ್ನ ಬಿಡಬೇಡ. ಹುಡುಗರೊಂದಿಗೆ ವಿನಯವಿರಲಿ. ಆಶ್ರಮದಲ್ಲಿರುವವರನ್ನು ಏನಾದರೂ ತಪ್ಪು ಮಾಡಿದ ಕೂಡಲೆ ಹೊರಟು ಹೋಗಿರಿ ಎನ್ನುವುದು ಅಪಮಾನಕರ. ಯಾರನ್ನೂ ಹೀಗೆ ಅನ್ನಬೇಡ.

ನಮ್ಮ ರಾಷ್ಟ್ರಗೀತ ನಮಗೆ ಇಷ್ಟವಿದ್ದಂತೆಯೆ ಇದೆ. ಸ್ವಪ್ನದ ಪೃಥಕ್ಕರಣವನ್ನು ನಾನು ಮಾಡಲಾರೆ.

ಭಾವನೆಯನ್ನು ಇಂಥ ಸಮಯದಲ್ಲೇ ಪ್ರಕಟಮಾಡಬೇಕೆಂಬ ನಿಯಮವಿಲ್ಲ. ಸತ್ಯನಾರಾಯಣನ ಪ್ರೇರಣೆಯಾದಾಗ ಪ್ರಕಟ ಮಾಡ ಬಹುದೆಂದು ನಾನು ಹೇಳಬಲ್ಲೆ.

ಯರವಡಾ ಮಂದಿರ, ೬-೧೧-೩೨

**ಬಾಪೂನ ಆಶೀರ್ವಾದ.**

**೩೧**

ಈ ಹೊತ್ತೂ ಸಣ್ಣಕಾಗದವೇ. ಇತ್ತೀಚೆಗೆ ಹರಿಜನ ಸೋದರ ಸೋದರಿಯರ ಸಂಗಡ, ನನ್ನ ಹೊತ್ತು ಬಹಳ ಹೋಗುತ್ತದೆ.

ನನ್ನಲ್ಲಿಯು ಭಾವನೆಯ ಬಗ್ಗೆ ಕೇಳುತ್ತೀ. ಅದರಿಂದ ಏನಾದರೂ ಲಾಭವಾದೀತೆಂದು ಎನಿಸುವುದಿಲ್ಲ. ಯಾಕೆಂದರೆ, ತನ್ನಲ್ಲಿ ಮೂಡಿದ ಭಾವನೆಯ ಪೃಥಕ್ಕರಣ ಮಾಡಲು ಯಾರಿಗೂ ಬಾರದು.

ಯಾವುದಾದರೂ ತತ್ವ ವ್ಯವಹಾರದಲ್ಲಿ ಸಾಧ್ಯವಲ್ಲ ಎನಿಸಿದರೆ

ಆ ತತ್ತ್ವ ನಮಗೆ ಸರಿಯಾಗಿ ಅರ್ಥವಾಗಿಲ್ಲವೆಂದು ತಿಳಿಯಬೇಕು. ಶುದ್ಧ ತತ್ತ್ವ ವ್ಯವಹಾರದಲ್ಲಿ ಬರಲೇಬೇಕು. ಯಾವ ತತ್ತ್ವವೂ ಸಂಪೂರ್ಣವಾಗಿ ವ್ಯವಹಾರದಲ್ಲಿ ಬರಲಾರದು; ಅದು ಅಸಾಧ್ಯ. ಆದರೆ ತತ್ತ್ವದ ನೆರೆಗೇ ಹತ್ತದ ವ್ಯವಹಾರ ಅಶುದ್ಧ, ತ್ಯಾಜ್ಯ.

೧೩-೧೧-೩೨

ಬಾಪೂನ ಆಶೀರ್ವಾದ

## ೫೨

ನಿನ್ನ ಕಾಗದ ಬಂತು. ಸಂಯಮ ಬಲ್ಲವರಿಗೆ ಆಹಾರದಲ್ಲಿ ಬದಲು ಮಾಡಿಕೊಳ್ಳುವುದೂ ಒಂದು ರುಚಿಯೇ. ಆಹಾರದಲ್ಲಿ ಜೇಲಿನ ಏರ್ಪಾಡನ್ನೇ ಆಶ್ರಮದಲ್ಲೂ ಮಾಡಿದ್ದಾರೆ ಎಂದು ವರ್ತಮಾನಪತ್ರದಲ್ಲಿ ಬಂದಿದೆ. ಈ ಮಾತು ನಿಜವಿದ್ದರೆ ಅಡ್ಡಿಯಿರಲಿಲ್ಲ. ಆದರೆ ನಾವು ಹಾಲು ತುಪ್ಪ ಮುಂತಾದ ಅನೇಕ ಪದಾರ್ಥ ಬಳಸುತ್ತೇವೆ. ಹೀಗಿದ್ದೂ ಜೇಲಿನ ಆಹಾರ ಕೊಡುತಿದೇವೆ ಎಂದರೆ ಸರಿಯೆ? ಈ ಹರಟೆ ಹೇಗೆ ಹುಟ್ಟಿತೋ ತಿಳಿದರೆ ಬರೆ.

ಕಟ್ಟುನಿಟ್ಟು ನಿಯಮಗಳನ್ನು ಮಾಡುವವನೂ ನಾನೇ, ಆಶ್ರಮದಲ್ಲಿ ವಿಲಾಸಿ ಜನರಿಗೆ ಎಡೆಗೊಡುವವನೂ ನಾನೇ-ಎಂದು ನೀನು ಮಾಡಿದ ಆಕ್ಷೇಪಣೆ ಸರಿ. ಇದರ ವಿರುದ್ಧವಾಗಿ ನೀವು ಪ್ರತೀಕಾರ ಮಾಡಬಹುದು ಎಂದು ನಾನು ಹೇಳಿಯೇ ಇದೇನೆ. ನಿಮ್ಮ ಅಳತೆಗೆ ಮೀರಿದವರನ್ನು ಸೇರಿಸಿಕೊಳ್ಳಬೇಕೆಂದು ನೀವೇನೂ ಬಂಧನ ಹಾಕಿಕೊಂಡಿಲ್ಲ. ನನ್ನದು ಸಲಹೆ ಹೇಳುವುದು; ಮಾಡುವುದು ಬಿಡುವುದು ನಿಮ್ಮ ಕೆಲಸ. ನಮ್ಮ ಮಟ್ಟಿಗೆ ಕಟ್ಟುನಿಟ್ಟಿನ ನಿಯಮಗಳನ್ನು ಅನುಸರಿಸುತ್ತ, ನಿಯಮಗಳಿಲ್ಲದವರು ಯಾರಾದರೂ ಬಂದರೆ ಅವರನ್ನು ತೂಗಿಸಿಕೊಂಡು ಹೋಗುವ ಔದಾರ್ಯ, ಶಕ್ತಿ ನಮ್ಮಲ್ಲಿ ಇರಬೇಕು.

ಪ್ರತಿಜ್ಞೆ ಸಣ್ಣದೇ ಇದ್ದರೂ ಅದನ್ನು ನಡಸುವುದು ಸಾಧ್ಯವಾದರೆ ದೇವರ ಅನುಗ್ರಹ ಎನ್ನಬೇಕು; ಅದರಲ್ಲೇನೂ ಸಂಶಯವಿಲ್ಲ.

೨೬-೧೧-೩೨

ಬಾಪೂನ ಆಶೀರ್ವಾದ

**೫೩**

"......ರಿಗೆ ನನ್ನ ಕಾಗದ ತೋರಿಸಬೇಡಿ" ಎಂದು ನೀನು ಕೊಟ್ಟ ಅಪ್ಪಣೆ ಪಾಲಿಸಿದೆ. ಆದರೆ ಆ ನಿಷೇಧಾಜ್ಞೆಯನ್ನು ಮಾತ್ರ ಓದಿ ತೋರಿಸಬೇಕಾಯಿತು. ಅವರ ವಿಷಯವಾಗಿ ನೀನು ಬರೆದದ್ದು ಅವರಿಗೂ ತಿಳಿಯಬಾರದು ಎಂದು ನಿನ್ನ ಅಭಿಪ್ರಾಯವಿರಲಾರದು; ಹೀಗೆ ನಾನು ತಿಳಿದಿದೇನೆ. ಅಂತೇ, ಅದಷ್ಟು ಭಾಗವನ್ನೆ ತೋರಿಸಿ, ಉಳಿದದ್ದು ಓದಬೇಡಿ ಎಂದು ಹೇಳಿದೆ. ನಿನ್ನ ಈ ನಿಷೇಧಾಜ್ಞೆ ನನಗೆ ಸರಿ ತೋರಲಿಲ್ಲ. ಆಶ್ರಮದಲ್ಲಿರುವವರು ಪರಸ್ಪರವಾಗಿ ಯಾವ ಮಾತನ್ನಾದರೂ ಯಾಕೆ ಅಡಗಿಸಿಡಬೇಕು. ಎಳೆಯ ಮಕ್ಕಳು ಅಥವಾ ದೊಡ್ಡವರಲ್ಲಿ ಹುಂಬ ರಾದವರು ಹೀಗೆ ಹೇಳಿದರೆ ನನಗೆ ಅರ್ಥವಾಗುತ್ತದೆ. ಆದರೆ ನೀನು ಈ ರೀತಿ ಗುಟ್ಟಾಗಿಡಲು ಏನು ಕಾರಣ? ನಿನ್ನ ಕಾಗದಗಳನ್ನು ಇತರರು ಓದಿದರೆ ಅದರ ಪವಿತ್ರತೆ ತಗ್ಗದು, ಹೆಚ್ಚುತ್ತದೆ. ಜಗತ್ತಿಗೆ ನಿನ್ನ ವಿಚಾರ ತಿಳಿಯಿತೆಂದು ಸಂಕೋಚಪಡುವುದೇಕೆ? ಗುಪ್ತ ವಿಚಾರ ಮಾಡುವ ಅಧಿಕಾರ ನಮಗಿಲ್ಲ. ಹೀಗೆ ಅಭ್ಯಾಸ ಮಾಡಿದರೆ ವಿಚಾರ ನಮ್ಮ ಅಂಕೆ ಯಲ್ಲಿದ್ದೀತು. ಮನುಷ್ಯ ದೇವರ ಪ್ರತಿನಿಧಿ. ನಮ್ಮೆಲ್ಲರ ವಿಚಾರಗಳೂ ದೇವರಿಗೆ ತಿಳಿದೇ ತಿಳಿಯುತ್ತವೆ. ಆದರೆ ಅವನು ನಮ್ಮ ಕಣ್ಣಿಗೆ ಕಾಣಸಲ್ಲ. ಅಂತೇ ಅವನಿಗೆ ನಿಜವಾಗಿ ಗೊತ್ತಿದೆಯೋ ಇಲ್ಲವೋ ನಮಗೆ ತಿಳಿಯುವು ದಿಲ್ಲ. ಆದರೆ ಮನುಷ್ಯ ದೇವರ ಪ್ರತಿನಿಧಿ ಎಂದು ಒಪ್ಪಿದಾಗ ನಮ್ಮ ವಿಚಾರ ಅವನಿಗೆ ತಿಳಿದರೆ ತಾನೆ ನಮಗೇಕೆ ಸಂಕೋಚ? ಈ ಪ್ರತಿನಿಧಿ ನಮ್ಮ ಇದುರಿಗೆ ಪ್ರತ್ಯಕ್ಷವಾಗಿರುವುದರಿಂದ ನಮಗೆ ವಿಚಾರನಿಗ್ರಹ ಬರುತ್ತದೆ. ವಿಚಾರ ಮಾಡಿ ಜ್ಞಾನಪೂರ್ವಕವಾಗಿ ನಿನ್ನ ನಿಷೇಧಾಜ್ಞೆ ಯನ್ನು ನೀನೇ ತೆಗೆದುಬಿಡಬೇಕು ಎನಿಸುತ್ತದೆ.

ಬಲಗೈಯಿಂದಲೇ ಬರೆಯಲಾದೀತು ಎನಿಸಿತ್ತು. ಆದರೆ ಆ ಕೈ ಕೆಲಸಕ್ಕೇ ಬಾರದಂತಾಗಿದೆ. ಆದ್ದರಿಂದ ಮನಸಿನಲ್ಲಿದ್ದದ್ದೆಲ್ಲ ಬರೆಯಲಾಗ ಲಾರದು.

ಸೋದರಿ ....ಯ ಬಗ್ಗೆ ನಿನಗೆ ಅನಿಸಿದ್ದನ್ನು ಬರೆ, ಪರವಾಯಿಲ್ಲ.

ಏನು ಬರೆದರೂ ನಿನಗೆ ದ್ವೇಷಭಾವವಿಲ್ಲ ಎಂಬುದು ಅವಳಿಗೆ ಗೊತ್ತಿದೆ. ಆಸ್ಪತ್ರೆಯಿಂದ ನೀನು ಅವಸರ ಮಾಡಿ ಹೊರಬಿದ್ದೆ ಎನಿಸುತ್ತದೆ. ವೈದ್ಯರ ಸಲಹೆಯಂತೆ ನಡೆದಿದ್ದರೆ ಈ ತೊಂದರೆ ಬರುತ್ತಿರಲಿಲ್ಲ. ....ರ ಕಥೆ ದುಃಖಮಯವಾದದ್ದು. ......ರೇನು ಹೇಳುತ್ತಾರೋ ಕೇಳದೆ....ರ ದೋಷದ ಬಗ್ಗೆ ಏನೂ ಹೇಳಲಾರೆ. ....ರು ಶುದ್ಧರಿದ್ದಾರೆ, ನಿರ್ದಯರಲ್ಲ; ಸ್ವಧರ್ಮವನ್ನು ಬಲ್ಲವರು. ಹೆಚ್ಚು ಬಿಡುವಿದ್ದರೆ ಹೆಚ್ಚು ಬರೆಯಬಹುದಾಗಿತ್ತು. ಆದಷ್ಟು....ಸೇವೆ ಮಾಡು. ಅವಳೊಬ್ಬಳೇ ಅಲ್ಲಿ ಬಿದ್ದಿದ್ದರೆ ಅದರಲ್ಲಿ ಅವಳ ತಪ್ಪು ಬೇಕಾದಷ್ಟಿದೆ. ಆದರೂ ಅವಳ ಸೇವೆ ಮಾಡು. ಅವಳಲ್ಲಿ ಸದ್ಗುಣವೂ ಬಹಳವಿದೆ.

......ಗೆ ಏನೂ ತಿಳಿಯುವುದಿಲ್ಲ. ಅವನು ಭೋಳೆ, ಆಟಗುಳಿ. ಅವನನ್ನು ತಮ್ಮ ಹತ್ತಿರ ಇಟ್ಟುಕೊಳ್ಳಲು ಅವನ ತಂದೆಗೆ ತಿಳಿಸಿದೇನೆ.

ಯರವಡಾ ಮಂದಿರ, ೧೮-೧೨-೩೨

ಬಾಪೂನ ಆಶೀರ್ವಾದ.

## ೫೪

ನಿನ್ನ ಕಾಗದ ಬಂದದ್ದರಿಂದ ನನ್ನ ಚಿಂತೆ ಹರಿಯಿತು. ಚಿಂತೆ ಕಲ್ಪನೆಯ ಕೂಸು. ಕಾಗದಬಾರದಿದ್ದರೆ ಚಿಂತೆಯೇಕೆ, ಬಂದರೆ ಸಂತೋಷವೇಕೆ? ಯಾಕೆ ಹೀಗೆ ಎಂದು ಕೇಳಿದರೆ ಹೇಳಲಾರೆ. ಹೇಳಲೇಬೇಕೆಂದರೆ ಇಷ್ಟು ಬರೆಯುತ್ತೇನೆ: ಇದರ ಹೆಸರು ಮೋಹ.

ಹುಚ್ಚಿಯಂತೆ ನೀನೇನಾದರೂ ಬರೆಯುತ್ತೀ ಎಂದು ನನಗೆ ಕೆಡುಕೆನಿಸದು. ನಿನ್ನ ತಪ್ಪು ನಿನಗೆ ತೋರಿಸಿಕೊಡದಿದ್ದರೆ ನಾನು ನಿನ್ನ ಹಿತೈಷಿ, ಮಿತ್ರ, ಜೊತೆಗಾರ, ಅಥವಾ ತಂದೆ ಎನಿಸಿಕೊಳ್ಳಲಾರೆ. ನಾನು ಶುದ್ಧಭಾವದಿಂದ ಹೇಳಿದುದಕ್ಕೆ ನಿನಗೆ ಸಿಟ್ಟೇಕೆ ಬರುತ್ತದೆಯೋ ವಿಚಿತ್ರವಾಗಿದೆ. ನೀನು ನನಗೆ ಧನ್ಯವಾದವನ್ನೇಕೆ ಕೊಡಬಾರದು? ನಮ್ಮ ವಿಷಯವಾಗಿ ಅನಿಸಿದ್ದನ್ನು ಹೇಳಿದ ನಮ್ಮ ಜೊತೆಗಾರ ಎಂದು ಅವನಿಗೆ ನಾವು ಕೃತಜ್ಞರಾಗಬಾರದೇ? ನಾನಂತೂ ಚಿಕ್ಕತನದಲ್ಲೇ ಈ ಪಾಠ ಕಲಿತೆ. ಇಷ್ಟನ್ನಾದರೂ ನೀನು ನನ್ನಿಂದ ಕಲಿ. ನನ್ನ ನಿದಾನ

ತಪ್ಪಾಗಿದ್ದರೆ ನನ್ನ ಮೇಲೆ ದಯೆಯಿರಲಿ. ಸರಿಯಾಗಿದ್ದರೆ ನಿನಗೆ ಉಪಕಾರವಾದೀತು. ನಿನಗೇನು, ಹಾಗೂ ಲಾಭ ಹೀಗೂ ಲಾಭ. ನಿನ್ನ ಜೊತೆಯವರನ್ನು ಮತ್ತಿಷ್ಟು ಚೆನ್ನಾಗಿ ತಿಳಿದುಕೊಳ್ಳಬಲ್ಲೆ. ನನ್ನ ದೋಷ, ಅಪಕ್ವತೆ ಎಲ್ಲವನ್ನೂ ನೀವೆಲ್ಲರೂ ಪೂರ್ಣವಾಗಿ ತಿಳಿದುಕೊಳ್ಳಬೇಕೆಂದು ನನ್ನ ಇಚ್ಛೆ. ಅವನ್ನು ನಿಮಗೆ ತಿಳಿಸಬೇಕೆಂದು ನಾನು ಸದಾ ಪ್ರಯತ್ನ ಮಾಡುತಿರುತ್ತೇನೆ. ನನಗೆ ನನ್ನ ವಿಚಾರಗಳನ್ನು ಮರೆಮಾಡುವ ಉದ್ದೇಶವಿಲ್ಲ. ಅವನ್ನೆಲ್ಲ ಬರೆಯುವ ಶಕ್ತಿ ಬಂದರೆ ಎಲ್ಲವನ್ನೂ ಬರೆದೇನು. ಆದರೆ ಅದು ಸಾಧ್ಯವಿಲ್ಲ ಎಂಬುದನ್ನು ನಾನು ಬಲ್ಲೆ. ವಿಚಾರವೇಗವನ್ನು ಸರಿಗಟ್ಟಬಲ್ಲ ಶಕ್ತಿ ಜಗತ್ತಿನಲ್ಲಿದೆ ಎನಿಸುವುದಿಲ್ಲ. ವಿಚಾರ ಮಾಪಕಯಂತ್ರವನ್ನು ಯಾರಾದರೂ ಕಂಡು ಹಿಡಿದರೆ ಆಗ ಇದು ತಿಳಿದೀತು. ಇದನ್ನು ಬರೆಯುವಾಗ ಕೂಡ ನನ್ನ ವಿಚಾರ ಐದಾರು ಸಲ ಬ್ರಹ್ಮಾಂಡದ ಪ್ರದಕ್ಷಿಣೆ ಮಾಡಿ ಬಂದವು.

ನಮ್ಮಲ್ಲಿ ವಿಷವುಂಟೋ ಇಲ್ಲವೋ ಎಂಬುದರ ಪರೀಕ್ಷೆ ನಾವು ಖಂಡಿತವಾಗಿಯೂ ಮಾಡಬಲ್ಲೆವು ಎಂಬ ನಿಯಮವೇನಿಲ್ಲ; ಇದನ್ನು ನೀನೂ ಒಪ್ಪುತ್ತೀ ತಾನೆ. ವಿಷ ಸಂಗ್ರಹದ ಬುದ್ಧಿ ನಮಗಿರದಿದ್ದರೂ ವಿಷ ಇರಲಾರದು ಎಂದಲ್ಲ. ನಮಗೆ ಇಷ್ಟವಿರದಿದ್ದರೂ ಅದು ನಮ್ಮ ಸವಾರಿಮಾಡುತ್ತದೆ. ಸಿಟ್ಟಿದ್ದವರಲ್ಲಿ ವಿಷವುಂಟು ಎಂದರೆ ನೀನು ಒಪ್ಪಲಾರೆ. ಈ ಮಾತು ನಿನಗೊಪ್ಪಿಗೆಯಿಲ್ಲದಿದ್ದರೆ ವಿಷ ಎಂದರೆ ನಿನ್ನ ಅರ್ಥ ಬೇರೆ, ನನ್ನ ಅರ್ಥವೇ ಬೇರೆ. ನಾನು ವಿಷಪೂರ್ಣ ಎಂದು ಬಾ ಗೆ ಬಹಳ ಸಲ ಅನಿಸಿದೆ. ಆಕೆ ಮಾಡಿದ ಆರೋಪವನ್ನು ನಾನು ಅಲ್ಲವೆನ್ನಲಿ ಹೇಗೆ? ನನ್ನ ಮಾತಿನಲ್ಲಿ ನನಗೆ ವಿಷ ಕಾಣದಿದ್ದರೆ ಏನಾಯ್ತು? ಆಕೆಗೆ ಆ ಮಾತು ಕುಟುಕಿತು. ಸಾಲದೇನು ನನಗದು? ಮಾತಿನಲ್ಲಿ ಸತ್ಯ ಅಹಿಂಸೆಗಳನ್ನು ಪೂರಾ ಸಾಧಿಸಿದವನು ಯಾರನ್ನೂ ಕಚ್ಚಲಾರ. ಮೊದಲಿಗೆ ಕಡಿತ, ಕುಟುಕು ಎನಿಸಬಹುದು; ಆದರೆ ಅನುಭವವಾದ ಮೇಲೆ ಕೊನೆಯಲ್ಲಿ ಅದು ಅಮೃತ ಎಂದು ಒಪ್ಪಿಕೊಂಡಾರು. ಎಲ್ಲ ಮಾತಿನಲ್ಲಿಯೂ ನೀನೇ ನಿನ್ನ ಪರೀಕ್ಷಕಳಾಗಬೇಡ. ಬೇರೆಯವರು ಮಾಡಿದ ಪರೀಕ್ಷೆಯೇ ಹೆಚ್ಚು ಒಳಿತು. ವಿಷಪ್ರಕರಣ ಇಲ್ಲಿಗೆ ಸಾಕು.

ಆಶ್ರಮ ಬಿಟ್ಟುಹೋಗುವ ವಿಷಯವಾಗಿ ನೀನು ಕೇಳಿದ ಪ್ರಶ್ನೆ ಸದ್ಯ ಅಪ್ರಸ್ತುತ. ಬಿಡುಗಡೆಯಾಗಿ ನಾನು ಆಶ್ರಮದಲ್ಲಿ ಇರುವಾಗ ಈ ಪ್ರಶ್ನೆ ಹುಟ್ಟಬಹುದು. ನಿನ್ನ ಕಾಗದದಲ್ಲಿ ಹಾಗಿದೆ. ನೀತಿಯ ದೃಷ್ಟಿಯಿಂದ ಈ ಪ್ರಶ್ನೆ ಆಗ ಹುಟ್ಟೀತು. ಆಶ್ರಮದಲ್ಲಿರುವುದು ನನಗೆ ಅನುಕೂಲವಾಗದಿರುವ ತನಕ ಆಶ್ರಮದ ಪಾಲಿಗೆ ನಾನು ಜೇಲಿನಲ್ಲಿದ್ದಂತೆಯೇ. ನಾನು ಆಶ್ರಮ ಬಿಟ್ಟು ಬರುವಾಗ ಅಲ್ಲಿದ್ದ ನೀವೆಲ್ಲರೂ ನಾನು ಬರುವ ತನಕ ಅಲ್ಲಿ ಬಂಧನದಲ್ಲಿದ್ದಂತೆಯೇ. ಈ ಅಭಿಪ್ರಾಯ ನಿನಗೆ ಸರಿತೋರಿದರೆ, ನಾನು ಆಶ್ರಮಕ್ಕೆ ಬಂದ ಮೇಲೆ ಅಲ್ಲಿ ಏನೇನು ಮಾಡಬೇಕೆಂದು ನಿನಗನಿಸುತ್ತದೆಯೋ ಅವನ್ನು ಬರೆ. ಈಗ ಈ ವಿಚಾರ ವನ್ನು ಮಾಡುವುದು ಶಕ್ತಿ, ಸಮಯಗಳ ಅಪವ್ಯಯ.

ಯಾರನ್ನೂ ನನ್ನ ಬಲೆಯಲ್ಲಿ ಕೆಡಹುವ ಇಚ್ಛೆಯಿಲ್ಲ. ಎಲ್ಲರೂ ನನ್ನ ಪ್ರತಿಮೆಗಳಾದರೆ ನನ್ನ ಗತಿಯೇನು? ಅಂಥ ಪ್ರಯತ್ನವೂ ವ್ಯರ್ಥ ವೆಂದು ತಿಳಿದಿದೇನೆ. ಒಂದು ವೇಳೆ ನಾನು ಯಾರಿಗಾದರೂ ಮೋಸ ಮಾಡುತ್ತಿದ್ದರೆ ನೀನೇಕೆ ನಿನ್ನ ಆತ್ಮವಿಶ್ವಾಸ ಕಳೆದುಕೊಳ್ಳಬೇಕು. ನೀನು ಸಾವಧಾನಳೆಂಬುದು ನಿನ್ನ ಕಾಗದದಿಂದ ತಿಳಿಯುತ್ತಿದೆ. ನಾನು ಮೋಸಹೋದೇನಲ್ಲ ಎಂದು ನಿನಗನಿಸಿದರೂ ಅನಿಸುತ್ತಿರಬೇಕು. ಇದು ದುರ್ಲಕ್ಷಣ. ನಿರ್ಧಾರ ಮಾಡಿದ ಮೇಲೆ ಭೀತಿಯೇಕೆ? ಮೋಸಹೋಗು ವುದು ಎಂಬುದರರ್ಥವನ್ನು ನಾವಿಬ್ಬರೂ ಬೇರೆ ಬೇರೆ ಮಾಡುತ್ತಿರಬೇಕು.

ಯರವಡಾ ಮಂದಿರ, ೨೨-೧-೩೩

**ಬಾಪೂನ ಆಶೀರ್ವಾದ.**

೫೫

ಮೌನದಿನದ ಮುಂಜಾನೆ ಇದು. ಮೂರುಗಂಟೆಗೇ ಎದ್ದು ನಿನ್ನ ಕಾಗದ ನೋಡಿದೆ. ಈ ಕಾಗದ ಬಹಳ ಸೇರಿತು ನನಗೆ. ನನಗೆ ಬೇಕಾ ದುದೆಲ್ಲ ಬರೆದಿದೀಯೆ. ಹೆಂಗಸರು ಏನು ಕೊಡಬಹುದೆಂದು ನಾನು ತಿಳಿದಿದ್ದೇನೋ ಅದೆಲ್ಲ ಅಲ್ಲಿದೆ. ನಿರಾಡಂಬರವಾದ ಸೂಕ್ಷ್ಮಾತಿಸೂಕ್ಷ್ಮ ವಿಷಯ-ಶಾಸ್ತ್ರಜ್ಞಾನಕ್ಕೆ ಉಪಯೋಗವಾಗುವಂಥದು-ಇದೆ. ಇಂಥ

ತಟಸ್ಥಪತ್ರದಿಂದ ನನಗೆ ಜ್ಞಾನಸಂಪಾದನೆಯಾಗುತ್ತದೆ; ನಿನಗೂ ರರಿಗೂ ಹಾದಿ ತೋರಿಸಲು ಅನುಕೂಲವಾಗುತ್ತದೆ.

ಆಶ್ರಮ ನಿಜವಾಗಿ ಧರ್ಮಶಾಲೆಯೇ. ಧರ್ಮಶಾಲೆಗೆ ಎ ಅರ್ಥ: ದಾನವಾಗಿ ಕೊಟ್ಟ ವಾಸದ ಮನೆ; ಧರ್ಮವನ್ನರಿತು ಪಾ ಮಾಡಲು ಪ್ರಯತ್ನ ಮಾಡುವ ಸ್ಥಳ. ಎರಡನೆ ಅರ್ಥದಲ್ಲಿ ಆಶ್ರ ಧರ್ಮಶಾಲೆ. ಸತ್ಯ ಎಂದರೆ ಧರ್ಮ; ಅಂತಲೇ ಸತ್ಯಶೋಧನೆ ಮ ಅದರಂತೆ ನಡೆಯುವ, ಎಂದರೆ ಸತ್ಯದ ಆಗ್ರಹ ತೊಡುವ ಆಶ್ರ ಸತ್ಯಾಗ್ರಹಾಶ್ರಮ.

ಸತ್ಯಶೋಧನೆ ಮಾಡುವಾಗ ಜೀವೈಕ್ಯವನ್ನೂ ಸಾಧಿಸಬೇಕಾಗ ತ್ತದೆ. ಆದ್ದರಿಂದ ಆಶ್ರಮ ವಿಶಾಲವಾಗುತ್ತ ಹೋಗುವ ಒಂದ ಕುಟುಂಬ. ಇಷ್ಟೇ ಅಲ್ಲದೆ ಇನ್ನೂ ಹೆಚ್ಚಾಗಿದೆ. ಇದರ ಮೇಲೆ ಧರ್ಮ ನಿಂತಿಲ್ಲ, ಇದೇ ಧರ್ಮಕ್ಕೆ ಅನುಷಂಗವಾಗಿದೆ. ಇದು ಶಿಕ್ಷಣಾಲಯ ಆದರೂ ಹಾಗಿಲ್ಲ. ಏಕೆಂದರೆ ಇದೊಂದು ಕುಟುಂಬ. ಸಾಮಾನ್ಯ ಶಿಕ್ಷಣದ ಬಾಹ್ಯನಿಯಮಗಳು ಅದಕ್ಕೆ ಹೊಂದುವುದಿಲ್ಲ. ಏಕೆಂದರೆ, ನಿಯಮಗಳ ಆತ್ಮಪಾಲನೆಗಾಗಿ ಅದರ ದೇಹತ್ಯಾಗ ಮಾಡಬೇಕಾಗುತ್ತದೆ.

ಉದಾಹರಣೆಗೆ—ಲಕ್ಷ್ಮಿಯನ್ನು ಪಾಲಿಸುವುದರಲ್ಲಿದೆ ನಮ್ಮೆಲ್ಲರ ಪರೀಕ್ಷೆ. ನಮ್ಮ ಮನೆಯ ಮಕ್ಕಳನ್ನು ಏನು ಮಾಡುತ್ತೇವೆ? ನಿನ್ನ ಸ್ವಂತ ತಂಗಿಯಿದ್ದರೆ ನೀನು ಏನು ಮಾಡುತ್ತಿದ್ದೆ? ಲಕ್ಷ್ಮಿ ನಿಯಮ ಪಾಲನೆ ಮಾಡಲಿಲ್ಲ, ಕಲಿಯಲಿಲ್ಲವೆಂದರೆ ಅದರ ದೋಷ ನನ್ನದು: ತರುವಾಯ ನಿನ್ನದು. ಉಳಿದವರನ್ನು ಬಿಟ್ಟುಬಿಡುತ್ತೇನೆ. ಈ ಕೆಲಸ ಮುಖ್ಯವಾಗಿ ಹೆಂಗಸರದು. ಅದರಲ್ಲಿಯೂ ಯಾರಿಗೆ ಈ ಕೆಲಸ ಒಪ್ಪಿ ಸಿತ್ತೋ ಅವಳದು. ಅಂತೇ ನಾನು ಮೊದಲನೆ ಅಪರಾಧಿ. ತಂದೆ ತಾಯಿ ಎರಡೂ ನಾನೇ ಎಂದು ಅವಳು ತಿಳಿದಿದಾಳೆ. ಪಿತೃಧರ್ಮ ಪಾಲಿಸಿದೆ ನಾನು; ಮಾತೃಧರ್ಮ ಪಾಲಿಸಲಿಲ್ಲ. ನಾನು ಹೊರಗೆ ತಿರುಗಾಡುತ್ತಿರು ವುದರಿಂದ ಹಾಗಾಯಿತು. ಅಂತೇ ನನ್ನ ಲಕ್ಷ್ಮಿಯನ್ನು ಆಶ್ರಮದಲ್ಲಿಟ್ಟು ಕೊಳ್ಳಲೇಬಾರದಾಗಿತ್ತು. ಆದರೆ ಹೀಗೆ ಮಾಡಲು ನಾನಾರು?

ನಾನು ದೇವರು ಅಡಿಯಾಳು. ಲಕ್ಷ್ಮಿಯನ್ನು ಹುಡುಕಲು ನಾನೇನು ಹೋಗಿರಲಿಲ್ಲ. ದೇವರೇ ಅವಳನ್ನು ಕಳಿಸಿದ; ಸಂರಕ್ಷಣೆಯನ್ನೂ ಅವನೇ ಮಾಡುತ್ತಾನೆ.

ಬಾ, ಸಂತೋಕ್, ಗಂಗಾಬೇನ್, ಈಗ ನೀನು-ನಿಮ್ಮಲ್ಲಿ ಯಾರೂ ಅವಳನ್ನು ಕರೆಯಲಿಲ್ಲ. ಕಾಲಬಂದಂತೆ ಅವರವರ ಕಡೆ ಅವಳು ಹೋದಳು. ಈಗ ನಿನ್ನ ಕೈಲಾದದ್ದು ಮಾಡು. ಏನಾದರೂ ಕೇಳಬೇಕಾಗಿದ್ದರೆ ನನ್ನನ್ನು ಕೇಳು. ಆಯಾಸಪಡಬೇಡ; ನಿರಾಶಳಾಗಬೇಡ. ಶ್ರದ್ಧೆಯಿಡು. ಅವಳ ಮೇಲೆ ಒಲವಿನ ಮಳೆ ಕರೆ. ಕೊನೆಯಲ್ಲಿ ದೇವರು ಅನುಗ್ರಹಿಸಿಯಾನು. ಹರಿಜನರ ಪ್ರತಿನಿಧಿಯೆಂದು ನಮ್ಮಿಂದ ಋಣ ತೀರಿಸಿಕೊಳ್ಳಲು ಬಂದಿದ್ದಾಳೆ ಆಕೆ. ಆಕೆ Idiot-ದಡ್ಡಳೂ, Indolnet, ಸೋಮಾರಿಯೂ ಆಗಿದ್ದರೆ ಆ ಪಾಪಕ್ಕೆ ನೀನೂ, ನಾನೂ, ಎಲ್ಲ ಸವರ್ಣ ಹಿಂದುಗಳೂ ಹೊಣೆ. ಮಾಡಿದ್ದುಣ್ಣೋ ಮಹಾರಾಯಾ

ಹೊಸದಾಗಿ ಹುಡುಗರು ಹುಡುಗಿಯರು ಬರುವುದನ್ನು ನೋಡಿ ಬೆದರಬೇಕಾಗಿಲ್ಲ. ಅವರು ಎಷ್ಟರ ಮಟ್ಟಿಗೆ ನಿಯಮಪಾಲನೆ ಮಾಡಿದರೆ ಅಷ್ಟೇ ಲಾಭ. ಸಾಧ್ಯವಿದ್ದಷ್ಟು ದಿನ ಅವರು ಇರಲಿ. ಆಗದಿದ್ದಾಗ ಕಳಿಸಿಬಿಡಿರಿ. ಧರ್ಮಶಾಲೆಯಲ್ಲಿ ಪ್ರಯಾಣಿಕರು ಸ್ಥಿರವಾಗಿ ನಿಲ್ಲರು. ಕುಟುಂಬದ ಜನರು ತಾನೆ ಸ್ಥಿರವೆ? ಆಶ್ರಮದ ಚೌಕಟ್ಟಿಗೆ ಸರಿಯಾದವರು ಇದ್ದಾರು; ಉಳಿದವರು ಹೋದಾರು. ಇದಕ್ಕೆ ಹಿಗ್ಗೂ ಬೇಡ, ನೋವೂ ಬೇಡ. ಹಾಗೆ ನೋಡಿದರೆ ಸದ್ಯ ನಮ್ಮಿಂದ ವಿಶೇಷವೇನೂ ಆಗುವಂತಿಲ್ಲ. ಶಕ್ತ್ಯನುಸಾರ ಬಂದವರನ್ನು ನೋಡಿಕೊಳ್ಳಬೇಕು; ಸಾಧ್ಯವಾದ ಮಟ್ಟಿಗೂ ಅವರನ್ನು ಉಳಿಸಿಕೊಳ್ಳಬೇಕು. ಎಷ್ಟೋ ಜನ ತಾವಾಗಿಯೇ ಓಡಿಹೋದಾರು. ನಮ್ಮ ನಿಯಮಗಳೇ ಎಷ್ಟೋ ಜನರನ್ನು ಓಡಿಸುತ್ತವೆ. ಯಾರು ಬಂದರೂ ಕೂಲಿಯವನ ಹಾಗೆ ದುಡಿಯಲೇ ಬೇಕಲ್ಲ. ಪಾಯಖಾನೆ ಬಳಿಯಬೇಕು; ಅನ್ನವನ್ನು ಔಷಧದ ಹಾಗೆ ತಿನ್ನಬೇಕು; ಬೆಲ್ಲ ಇಲ್ಲ, ಗೋಧಿ ಕೂಡ ಬೇಕಾದಾಗ ಇಲ್ಲ. ಬಡವರ, ಕಂಗಾಲರ, ಹಸಿದವರ ಪ್ರತಿನಿಧಿ ಆಶ್ರಮ ಎಂದು

ದಿನವೂ ಪ್ರಮಾಣಿಸಿಕೊಡುತ್ತಿದ್ದರೇನೇ ನಾವು ಸುರಕ್ಷಿತವಾಗಿ ಸುಖವಾಗಿ ಉಳಿದೇವು. ಆದ್ದರಿಂದ ಆಶ್ರಮದಲ್ಲಿ ಸರಳ ಜೀವನ ಬೆಳೆಯಬೇಕು. ನಿಯಮಪಾಲನೆ ಕಟ್ಟುದಿಟ್ಟವಾಗಿ ನಡೆಯಬೇಕು. ಬೆಂಕಿ ನಿಜಸ್ವರೂಪದಲ್ಲಿದ್ದಾಗ ಅವನ ಸಹವಾಸದಲ್ಲಿ ಬದುಕಲಾರದ ಜೀವ ಅವನ ಜೊತೆಗೆ ಇರಲಾರದು. ಇದು ಅದರ ದೋಷವಲ್ಲ, ಗುಣ. ಹಾಗೆ ನಾವು ನಿಜಸ್ವರೂಪದಿಂದಿಲ್ಲ. ಅಂತೇ ಈ ಉಪಾಧಿಗಳೆಲ್ಲ ಹುಟ್ಟುತ್ತಿವೆ. ಸರಳ ಜೀವನದ ಕಟ್ಟುನಿಟ್ಟಿನ ಬಗ್ಗೆ ಬರೆದದ್ದು ನಮ್ಮ ಮಟ್ಟಿಗೆ ಮಾತ್ರ. ನಮ್ಮಲ್ಲಿ ಅದರ ಅಂಶ ದಿನೇ ದಿನೇ ಬೆಳೆಯಬೇಕು. ನಮ್ಮ ರಕ್ಷಣೆಯ ಹಾದಿ ನಮ್ಮ ಅಂತರಂಗ ಮಥನದಿಂದ ತೆಗೆದದ್ದು; ಹೊರಗಿನಿಂದಲ್ಲ. ಜ್ಞಾನಪೂರ್ವಕವಾಗಿ ಆಶ್ರಮದಲ್ಲಿರುವವರು ನಾವು; ನಾನು, ನೀನು, ಎಲ್ಲರೂ. ಆಶ್ರಮವಾಸಗಳೆಲ್ಲ ಪಾಲಿಸುವ ನಿಯಮವನ್ನೇ ನಾನು ಪಾಲಿಸಬೇಕು ಎಂಬಲ್ಲ. ಯಾವ ವಿಶೇಷ ನಿಯಮವನ್ನು ನಾನು ಪಾಲಿಸಬಹುದೋ ಅದನ್ನೇ ನಾನು ಪಾಲಿಸಬೇಕು. ಆಶ್ರಮದ ಏಳಿಗೆಯ ತಿರುಗಣೆ ಇದೇ. ಪರರ ವಿಷಯದಲ್ಲಿ ಔದಾರ್ಯ, ನಮ್ಮ ವಿಷಯದಲ್ಲಿ ಪೂರಾ ಕಟ್ಟುನಿಟ್ಟು–ಹೀಗಾದರೆ ಸ್ವಲ್ಪವಾದರೂ ವಿವೇಕವಾಗಿ ನಡೆಯಬಹುದು. ಪರರ ವಿಷಯದಲ್ಲಿ ನಾವು ತೋರುವ ಔದಾರ್ಯ ಎಷ್ಟೋ ಸಲ ನಿಜವಲ್ಲ; ನಮ್ಮ ಬಗ್ಗೆ ಕಟ್ಟುನಿಟ್ಟೂ ಹೆಸರಿಗೆ ಮಾತ್ರ.

ಅಖಂಡಬ್ರಹ್ಮಚರ್ಯವೇ ಹುಡುಗಿಯರಿಗೆ ಆದರ್ಶ. ಆದರ್ಶವಿವಾಹವೂ ಅದರಲ್ಲೇ ಸಮಾವೇಶವಾಗಿದೆ. ಮದುವೆಯ ವಿಷಯ ಕಲಿಸಬೇಕಾಗಿಲ್ಲ. ದೇಹಧಾರಿಯ ಸ್ವಭಾವದಲ್ಲೇ ಆ ಜ್ಞಾನವಿದೆ. ಈ ಸ್ವಭಾವವನ್ನೂ ಕಟ್ಟಿನೊಳಗಿಡಲು ಕೆಲವು ನಿಯಮಗಳನ್ನು ಮಾಡಬೇಕಾಯಿತು. ಬ್ರಹ್ಮಚರ್ಯವೇ ಈ ಸ್ವಭಾವಕ್ಕೆ ಪೂರ್ಣ ಅಂಕುಶ. ಪೂರ್ಣ ಅಂಕುಶ ಪಾಲಿಸಿದವಳು ಮದುವೆಯ ಚಿಕ್ಕನಿಯಮ ನಡೆಸಲಾರಳೆ? ಮೊದಲಿನಿಂದಲೂ ಮದುವೆಯೇ ಗುರಿಯೆಂದು ತಿಳಿದವಳಿಗೆ ಮದುವೆಯ ಸ್ವರೂಪವೇ ಗೊತ್ತಿಲ್ಲ. ವಿಕಾರಕ್ಕೆ ಕಲಿಕೆ ಬೇರೆ ಬೇಕೆ? ತಮ್ಮಷ್ಟಕ್ಕೆ ತಾವೇ ಹೊರಬೀಳುತ್ತವೆ ಅವು. ಆದರೆ ಬ್ರಹ್ಮಚಾರಿಣಿಗೆ ಗೃಹನಿರ್ವಹಣ

ಜ್ಞಾನವೂ ಅಗತ್ಯ, ಶಿಶುಸಂಗೋಪನಜ್ಞಾನವೂ ಬೇಕು. ಗವಿಸೇರಿದವಳು, ಏಕಾಕಿನಿಯಾದವಳು ಕುಮಾರಿಯಲ್ಲ; ಕುಮಾರಿ ಇಡೀ ಜಗತ್ತನ್ನೇ ಮದುವೆಯಾದಾಳು; ಜಗತ್ತಿಗೇ ತಾಯಾದಾಳು, ಮಗಳಾದಾಳು. ಪ್ರಪಂಚದ ಆಡಳಿತವನ್ನೇ ನಡಸಬಲ್ಲವಳಾದಾಳು. ಇಂಥ ಕುಮಾರಿ ಇದುವರೆಗೂ ಹುಟ್ಟಿರಲಿಕ್ಕಿಲ್ಲ. ಆದರೂ ಆದರ್ಶವೆಂದರೆ ಇದೇ. ಆದ್ದರಿಂದ ಎಲ್ಲರಿಗೂ ಒಂದೇ ತರದ ಶಿಕ್ಷಣಬೇಕು. ಇದನ್ನು ಸ್ಪಷ್ಟ ಮಾಡಿದೇನೆ.

ಆ ಮುಸಲ್ಮಾನ ಹೆಂಗಸಿನ ಬಗ್ಗೆ ಕರ್ತವ್ಯವೇನು ಎಂಬುದು ಇದರಿಂದ ಸ್ಪಷ್ಟವಾಗಿರಬೇಕು. ಹುಡುಗಿಯರ ಯೋಗ್ಯತೆ ಅಯೋಗ್ಯತೆಗೆ ನಮ್ಮ ಅಪೂರ್ಣತೆ ಕಾರಣ. ಸ್ವಲ್ಪವಾದರೂ ನಾವು ಮುಂದೆ ಹೋದವರಾಗಿದ್ದರೆ ತರುಣರ ವಿಷಯವಾಗಿ ನಮಗೆ ಭಯವಾಗಲಾರದು. ಎಲ್ಲಿ ಅಪಾಯ ಸಂಭವವುಂಟೋ ಅಲ್ಲಿ ಅವರನ್ನು ವರ್ಜಿಸಬೇಕು. ನನ್ನ ಭಾರವೆಲ್ಲ .....ನ ಮೇಲೇ ಇದೆ. ನನ್ನ ಮಟ್ಟಿಗೆ.....ಆಶ್ರಮದ ಕಾರ್ಯದರ್ಶಿಯಾಗಿದ್ದರೆ ಎಲ್ಲವೂ ಕುಶಲವಾದೀತು. ಅವನ ಬಗ್ಗೆ ನನ್ನ ಶ್ರದ್ಧೆ ಬೆಳೆಯುತ್ತಿದೆ. ಅವನು ಹೋದರೆ ಆಶ್ರಮದಲ್ಲಿ ಇನ್ನೂ ಹಳಬರಿದ್ದಾರಲ್ಲ ಅವರು ಮುಂದೆ ಬರಬಹುದು. ಅಂತೂ ಎಲ್ಲವೂ ಸರಿಯಾಗಿ ನಡೆದೀತು. ಆಶ್ರಮದಲ್ಲಿ ಜನ ಬಹಳ, ಆಶ್ರಮಿಗಳು ಕಡಮೆ. ಅಂತೇ ಆಯಾಸ ಬಹಳವಾಗುತ್ತದೆ. ಇಂಥ ಕೊರತೆಗಳನ್ನೆಲ್ಲ ನೀವೆಲ್ಲರೂ ಆದಷ್ಟು ನಿವಾರಿಸಿರಿ.

ಆಶ್ರಮ ನನ್ನ ಅಳತೆಗೋಲು. ಆಶ್ರಮ ನನ್ನ ಜೊತೆಯಲ್ಲೇ ಇರುತ್ತದೆ. ನನ್ನ ದೇಹ ಎಲ್ಲೇ ಇರಲಿ, ಆತ್ಮ ಆಶ್ರಮದಲ್ಲಿ. ಅದರ ದೋಷಗಳೆಲ್ಲ ದೃಷ್ಟವಾಗಿಯೋ ಅದೃಷ್ಟವಾಗಿಯೋ ನನ್ನಲ್ಲಿರಬೇಕು. ನಿಮ್ಮನ್ನೆಲ್ಲ ಅರ್ಥ ಮಾಡಿಕೊಳ್ಳುವುದರಲ್ಲಿಯೇ ತಪ್ಪಾಗಿದ್ದರೆ ಅದು ನನ್ನ ದೋಷವಲ್ಲದೆ ಮತ್ತಾರದು? ಆದರೆ ನಾನೇ ಸರಿಯಾಗಿ ನನಗರ್ಥವಾಗದಿದ್ದರೆ ನಿಮಗೆಲ್ಲಿ ನ್ಯಾಯಾಧೀಶನಾಗಲಿ? ಹೆಸರು ಹೇಳಬೇಕೆಂದರೆ, ಛಗನಲಾಲ್ ಮತ್ತು ಮಗನಲಾಲ್ ಇಬ್ಬರನ್ನು ಬಿಟ್ಟು ಉಳಿದವರನ್ನು

ಹುಡುಕಲಿಕ್ಕೆ ನಾನೆಲ್ಲಿ ಹೋಗಿದ್ದೆ? ದೇವರು ನನ್ನ ಪರೀಕ್ಷೆ ಮಾಡುವುದಕ್ಕೋ, ಅಥವಾ ನನಗೆ ಸಹಾಯ ಮಾಡುವುದಕ್ಕೋ ಅವರನ್ನು ಕಳಿಸಿದ.

೧೩-೨-೩೩

**ಬಾಪೂನ ಆಶೀರ್ವಾದ.**

**೫೬**

ಈ ಹೊತ್ತು ದೊಡ್ಡ ಕಾಗದ ಬರೆಯುವುದಿಲ್ಲ. ಇಂಗ್ಲಿಷ್ ಸದ್ಗೃಹಸ್ಥರೊಬ್ಬರನ್ನು ಕಳಿಸಿದೇನೆ. ಅವರ ಪರಿಚಯ ಮಾಡಿಕೋ. ಅವರು ತ್ಯಾಗಿಗಳಂತೆ ನನಗೆ ಕಾಣುತ್ತಾರೆ. ಅವರಿಗೆ ಏನು ಬೇಕೋ ವಿಚಾರಿಸು.

ಡಾಕ್ಟರರ ವಿಷಯ ತಿಳಿಯಿತು. ಅವರ ಬಳಿ ಹೋದ ಮೇಲೆ ಅವರಿಂದ ಏನು ಬೇಕೋ ಅದನ್ನು ಪಡೆಯಬೇಕು. ಹಾಗೆ ಮಾಡದಿರುವುದು ತಪ್ಪು. ಅದರಿಂದ ಹಾನಿಯೂ ಆದೀತು. ಎಷ್ಟೋ ಕೆಲಸ ಚೆನ್ನಾಗಿ ಮಾಡುತ್ತಾರೆ. ಇದನ್ನು ಒಪ್ಪಲೇಬೇಕು. ಅಶ್ರದ್ಧೆಯಿಂದ ಅಜ್ಞಾನದಿಂದ ಎಷ್ಟೋ ತಪ್ಪು ಮಾಡುತ್ತಾರೆ; ಇದು ಜಗತ್ತಿಗೇ ಗೊತ್ತಿದೆ. ಅವರ ನೆರವೇ ಬೇಡ ಎಂದು ಯಾರಾದರೂ ವ್ರತಹಿಡಿದರೆ ಆಕೆಗೆ ನಮಸ್ಕಾರ. ಕೋಟ್ಯಾವಧಿ ಜನರಿಗೆ ಡಾಕ್ಟರರ ನೆರವು ಸಿಗುವುದೇ ಇಲ್ಲವಲ್ಲ. ಆದರೆ ಇಂಥ ತ್ಯಾಗವ್ರತ ಆಶ್ರಮದ ಅಳವಿಗೆ ಮೀರಿದ್ದು. ಅಂತೇ ಚಲೋ ವೈದ್ಯರ ಸಹಾಯವನ್ನು ಆಗಾಗ ತೆಗೆದುಕೊಳ್ಳುತ್ತೇನೆ.

ಯರವಡಾ ಮಂದಿರ, ೧೯-೨-೩೩

**ಬಾಪೂನ ಆಶೀರ್ವಾದ.**

**೫೭**

ನೀನು ಕಳಿಸಿದ ಹಂಜಿಯಿಂದ ೭೫ ನಂಬರಿನ ಮೇಲೆ ನೂಲು ತೆಗೆಯಲಾಗಲಿಲ್ಲ. ೭೫ರ ನೂಲು ಕೀಳು ತರಗತಿಯದು ಎನ್ನುತ್ತಾರೆ. ನೀನು ಬರೆದು ಕಳಿಸಿದ ತೂಕದ ಲೆಕ್ಕದಿಂದ ನಂಬರು ಲೆಕ್ಕಹಾಕಿದೆ. ಇಲ್ಲಿನ ತಕ್ಕಡಿಯಲ್ಲಿ ಅಷ್ಟು ಸೂಕ್ಷ್ಮಲೆಕ್ಕ ತಿಳಿಯುವುದಿಲ್ಲ. ಕೈ ಸರಿಯಾಗಿ ನಡೆದರೆ ನಾನು ೧೦೦ರ ವರೆಗೂ ಹೋದೇನು ಎನಿಸುತ್ತದೆ.

ಹಸೀಪಲ್ಯ, ಖರ್ಜೂರಗಳಿಂದ ತೂಕ ಕಡಮೆ ಯಾಗಲೇಬೇಕು. ಇದರ ಜೊತೆಗೆ ಹಸೀ ಹಾಲು-ಆಗ ಹಿಂಡಿದ್ದು-ತೆಗೆದುಕೊಳ್ಳಬೇಕು. ಹಸೀ ಪಲ್ಯದಲ್ಲಿ ಟೊಮಾಟೊ, ಮೂಲಂಗಿ, ಗೆಜ್ಜರಿ ಅಥವಾ ಲೆಟ್ಯೂಸ್ ಇಂಥವು ಇರಬೇಕು. ಉಪ್ಪು ಇರಕೂಡದು. ನಿಂಬೆಯ ಹಣ್ಣು ೨-೩ ಆದರೂ ನೀರಲ್ಲಿ ಬೆರೆಸಿಕೊಂಡೋ ಖರ್ಜುರದ ಜೊತೆಗೋ ತಿನ್ನಬೇಕು. ನೀರಿನೊಳಗೆ ರಸಹಿಂಡಿ ಕುಡಿದರೆ ಒಳಿತು. ಹಲ್ಲು ಚಳಿತರೆ ಬಿಡಬೇಕು.

ಆಶ್ರಮದ ಲೋಪ, ನೀನೆಷ್ಟೇ ತೋರಿಸಿದರೂ ಒಪ್ಪುತೇನೆ. ಅದರ ಜೊತೆಗೆ ಉಪಾಯವನ್ನೂ ಶೋಧಿಸಿ ಬರೆದರೆ ಹೆಚ್ಚು ಒಳಿತು. ಉಪಾಯ ಸೂಚಿಸಲಾಗದಿದ್ದರೂ ನಿನ್ನ ಟೀಕೆ ನನಗೇಬೇಕು. ನನ್ನ ಬುದ್ಧಿಗೆ ತೋಚಿದಂತೆ ನಡಸುತ್ತಿದೇನೆ. ಆಶ್ರಮದ ಲೋಪ ನನ್ನದೋಷ. ಗಡಿಗೆ ಸೊಟ್ಟಾದರೆ ಗಡಿಗೆಯ ತಪ್ಪೋ ಕುಂಬಾರನ ತಪ್ಪೋ? ಈ ಉಪಮೆ ಹದಿನಾರಾಣೆ ಸರಿ. ಇದರಿಂದ ನನ್ನ ಮೌಢ್ಯವನ್ನೂ ನಾನು ಅಳತೆ ಮಾಡುತ್ತೇನೆ. ಲೋಪವಿದ್ದರೂ ಆಶ್ರಮ ನನಗೆ ಪ್ರಿಯ; ನನಗೆ ನಾನು ಪ್ರಿಯವಲ್ಲವೆ! ಅಲ್ಲವೆನಲಾರೆ. ಎಷ್ಟು ಗರ್ವವಿದ್ದರೆ ಅಷ್ಟು ನನಗೆ ನಾನೇ ಅಪ್ರಿಯ. ಅಹಂಕಾರ ಬಿಡಲು ನಿರಂತರವೂ ಪ್ರಯತ್ನ ಮಾಡುತ್ತಿದೇನೆ.

ಯರವಡಾ ಮಂದಿರ, ೬-೩-೩೩

ಬಾಪೂನ ಆಶೀರ್ವಾದ.

## ೫೮

ನಿನ್ನೆ ಸೊಗಸಾದ ಕಾಗದ ಬಂತು. ಈ ಭಾವನೆ ನಿನ್ನಲ್ಲಿ ದೃಢ ವಾಗಿ ನಿಲ್ಲಲಿ. ನಿನಗಾಗಿ ನೂಲು ತೆಗೆದಿಡಲಿಕ್ಕೆ....ಳಿಗೆ ಹೇಳಿದೆ. ನನ್ನನ್ನು ಬೇಕಾದದ್ದು ಬೇಡು. ನೂಲು ಬೇಡಿದರೇನು ತಪ್ಪು? ಬೇಡಿದ ರೀತಿ ತಪ್ಪಿತ್ತು; ಅದನ್ನು ಈಗ ತಿದ್ದಿಕೊಂಡಿದ್ದೀಯೆ. ಇನ್ನೇನೂ ಹೇಳಬೇಕಾಗಿಲ್ಲ.

ನೀನು ನೋಡುತ್ತಿದ್ದೀಯೆ. ನನ್ನ ಆಶೆಯೆಲ್ಲ ಸುಟ್ಟು ಬೂದಿ ಯಾಗುತ್ತಿವೆ. ......ವಿಷಯವಾಗಿ ನನಗೆ ಯಾವ ಸಂಶಯವೂ

ಬರಲಾರದು. ಅವರು ನನ್ನ ಆಸೆಯ ಗುಡ್ಡವಾಗಿದ್ದರು. ಆದರೆ ಅದರ ತಳಹದಿ ಉಸುಕಿನದು. ಇದರಿಂದ ಆಶ್ರಮ ಸಿದ್ಧಿಮಾರ್ಗದಲ್ಲಿ ಹೇಗೆ ಹೋಗಬೇಕು. ಯಾರೂ ಯಾರನ್ನೂ ನಿಂದಿಸದೆ ಸ್ವತಂತ್ರವಾಗಿ ಯತ್ನ ಮಾಡಿದರೆ ಸಾಧ್ಯವಾದೀತು? ನೀನು ಈ ಪ್ರಯತ್ನ ಮಾಡಬಲ್ಲೆಯಾ? ಬ್ರಹ್ಮಚರ್ಯಕ್ಕೆ ನನ್ನ ವ್ಯಾಖ್ಯೆ ನಿನಗೆ ಗೊತ್ತಿದೆ. ಅದನ್ನು ನೀನು ಸಾಧಿಸು. ರಾಗದ್ವೇಷಕ್ಕೆ ಅದರಲ್ಲಿ ಅವಕಾಶವಿಲ್ಲ. ನಿನ್ನನ್ನು ಟೀಕೆ ಮಾಡುವ ಇಷ್ಟ ನನಗಿಲ್ಲ, ಉಪದೇಶ ಮಾಡುವುದೂ ಬೇಕಾಗಿಲ್ಲ. ಭಿಕ್ಷೆ ನೀಡೆಂದು ಕೇಳುತ್ತಿದ್ದೇನೆ. ಈ ಭಿಕ್ಷಾಪಾತ್ರೆ ತುಂಬುವತನಕ ಆಶ್ರಮ ನಿಜವಾದ ಆಶ್ರಮವಾಗಲಾರದು.

ಆಶ್ರಮದಲ್ಲಿ ಅನೇಕ ಜನ ಮಹಾರಾಷ್ಟ್ರೀಯ ಸೋದರಿಯರಿದ್ದಾರೆ. ಕಳಿಸಿದೇನೆ ಎಂದು ಜಮುನಾಲಾಲಜೀ ಹೇಳುತಿದ್ದರು. ಅವರಲ್ಲಿ ಒಬ್ಬಳನ್ನಾದರೂ ತಮ್ಮ ಮಹಿಲಾಶ್ರಮಕ್ಕಾಗಿ ತಯಾರು ಮಾಡಬೇಕೆಂದು ಜಮುನಾಲಾಲಜಿಯ ಸಂದೇಶ. ಆಕೆ ಗಂಭೀರಳಿರಬೇಕು. ನನಗೆ ಬರೆ.

ಶ್ವೇತ ಪತ್ರದ (white paper) ವಿಷಯವಾಗಿ ನಾನೇನೂ ಹೇಳಲಾರೆ. ಇಲ್ಲಿರುವತನಕ ಅದು ನನ್ನ ರಂಗವಲ್ಲ ಎಂದು ಅದನ್ನು ಓದಿಯೇ ಇಲ್ಲ.

೨೬-೩-೩೩

ಬಾಪೂನ ಆಶೀರ್ವಾದ.

## ೫೯

....ವಿಷಯವಾಗಿ ಬರೆದಿದ್ದೀ. ಅದು ಅರೆಬರೆ ಸತ್ಯ. ತಪ್ಪು ಎಲ್ಲರಿಂದಲೂ ಆಗುವುದು ಸಹಜ. ಅದಕ್ಕೆ ದು:ಖಬೇಡ. ತಪ್ಪು ಮುಚ್ಚಿಟ್ಟು, ಅದು ಹೇಗೋ ಹೊರಬಿದ್ದಾಗ ಅಯೋಗ್ಯ ರೀತಿಯಿಂದ ನಮ್ಮ ತಪ್ಪಿನ ಸಮರ್ಥನೆ ಮಾಡಲು ನಾವು ಪ್ರಾರಂಭಿಸಿದರೆ, ಅದು ಬಹಳ ಕೆಟ್ಟದು. ಅದರಿಂದ ನಮಗೆ ದು:ಖವಾಗದಿದ್ದರೆ ಅಂಥ ತಪ್ಪನ್ನು ನಿಗ್ರಹಿಸಲು ಬೇರೆ ಉಪಾಯವೇ ಇಲ್ಲ. ಇಂಥ ಸಂಗತಿ ಸರ್ವಸಾಮಾನ್ಯ! ಇದನ್ನು ನಿಗ್ರಹಿಸುವ ಉಪಾಯವಾದರೂ ಏಕೆ ಎಂದೆವೋ

ಸಮಾಜದ ಸರ್ವನಾಶ ಸಿದ್ಧ. ಅಂತೇ ನಿಗ್ರಹೋಪಾಯ ಅಗತ್ಯ. ಅಪಾಯವಿದ್ದಾಗಲೇ ಅಂಥ ಉಪಾಯ ಹುಡುಕಬೇಕು. ಮಿಥ್ಯಾದುಃಖಿ, ಮಿಥ್ಯಾಕ್ರೋಧಿ ಯೋಗ್ಯನಲ್ಲ. ನೀನೂ ಇದನ್ನೇ ಹೇಳಬೇಕೆನ್ನುತ್ತೀ ಅಲ್ಲವೆ? ಹೆಚ್ಚು ಏನಾದರೂ ಹೇಳಿದರೆ ಅದು ತಪ್ಪು. ದುಃಖ, ಆಘಾತ ಗಳಿಗೆ ಬದಲು ಬೇರೆ ಶಬ್ದ ಹೇಳಿದರೆ ಸ್ವೀಕರಿಸುತ್ತೇನೆ. ನಿನ್ನ ಕಾಗ ದದಲ್ಲಿ ಮೋಹ ಹುದುಗಿಕೊಂಡಿದೆ. ಮೋಹ ಎಂಬ ಪದದ ಉಪಯೋಗ ಸರಿಯೋ ಅಲ್ಲವೋ ಹೇಳಲಾರೆ. ನನ್ನ ಅಭಿಪ್ರಾಯ ನಿನಗೆ ತಿಳಿದರೆ ಸಾಕು.

ನಿನ್ನಲ್ಲಿ ಸರಳತೆ, ಮಾರ್ದವ, ವಿನಯ, ಧೀರತೆ, ಸಹನಶೀಲತೆ, ಔದಾರ್ಯಗಳು ಬೇಕು. ನೀನು ಮುಗಿಲಿನಿಂದ ಇಳಿದುಬಂದರೆಯೆ ಇವೆಲ್ಲ ಬರಬೇಕಾದರೆ. ನಾವು ಕಃಪದಾರ್ಥ ಎಂದು ನಿನಗೆ ಯಾವಾಗ ತಿಳಿದೀತು? ಭೂಮಿತಾಯಿಗೆ ಇತ್ತ ನಮಸ್ಕಾರ, ಅತ್ತ ಕಾಲೊದೆತ– ಇದೇನಿದು? § ಈ ಪ್ರಾರ್ಥನೆ ಸತ್ಯವಾಗಿದ್ದರೆ ನಾವು ರಜಃಕಣವಾಗ ಬೇಕು, ಪ್ರಪಂಚದ ಒದೆಗಳನ್ನು ಸೈರಿಸಲು ಕಲಿಯಬೇಕು. ಹೀಗಾದರೆ ಭೂಮಿತಾಯಿಗೆ ನಮ್ಮ ಕಾಲು ತಗಲದಂತಾದೀತು. ಇಲ್ಲದಿದ್ದರೆ ಬದು ಕಿರುವಾಗಲೇ ಬೂದಿಯಾದೇವು. 'ದುಯೀಕೀ ಧೂಲ್ ಉಡಾತಾಜಾ.'

ಪರಚುರೆ ಶಾಸ್ತ್ರಿಗಳ ಮಗನನ್ನು ಬಳಿಸೇರಿಸಿದ್ದು ಒಳಿತು.

ನಿನ್ನ ಹಂಜಿ ಇನ್ನೂ ಇವೆ. ಅದರಲ್ಲಿ ಗಂಟು ಇವೆ. ಅದು ನಿನ್ನ ತಪ್ಪಲ್ಲ. ಕೆಲವಟ್ಟಿಗೆ ಹತ್ತಿಯದು, ಕೆಲವಟ್ಟಿಗೆ ಹಿಂಜುವವರದು. ಹೆಚ್ಚು ಹಿಂಜಿದ್ದರೆ ಎಳೆ ದುರ್ಬಲವಾಗುತ್ತಿತ್ತು. ಬೇರೆ ಹಂಜಿಗಳಿಂದ ಕೂಡ ಸಣ್ಣ ನೂಲು ಬಾರದು, ಆದರೆ ಅದರಲ್ಲಿ ಗಂಟು ಕಡಮೆ.

ಯರವಡಾ ಮಂದಿರ, ೨–೪–೩೩

**ಬಾಪೂನ ಆಶೀರ್ವಾದ**

---

§ ಸಮುದ್ರವಸನೇ ದೇವೀ ಪರ್ವತಸ್ತನ ಮಂಡಲೇ ।
ವಿಷ್ಣುಪತ್ನೀ ನಮಸ್ತುಭ್ಯಂಪಾದಸ್ಪರ್ಶಂ ಕ್ಷಮಸ್ವ ಮೇ ॥
(ಪ್ರಾತಃಪ್ರಾರ್ಥನೆ: ಆಶ್ರಮಭಜನಾವಲಿ.)

೬೦

ನಿನ್ನ ಕಾಗದ ಬಂತು. ಬರೆದರೆ ಬರೆದೆ, ಚೆನ್ನಾಗಿದೆ. ಈ ಹೊತ್ತೂ ಬಹಳ ಬರೆಯುವ ಹಾಗಿಲ್ಲ. ನಿನ್ನ ಕಾಗದ ಚೆನ್ನಾಗಿದ್ದರೂ ಬ್ರಹ್ಮ ಚಾರಿಣಿಗೆ ಯೋಗ್ಯವಲ್ಲದ ಕೆಲವು ಮಾತು ಅದರಲ್ಲಿವೆ. ನಾರದನ ಕತೆ ನೆನಪಿರಲಿ. ಬ್ರಹ್ಮಚರ್ಯದ ಅಭಿಮಾನ ಮೂಡಿದ ಕೂಡಲೆ ನಾರದ ಕೆಳಗೆ ಬಿದ್ದ. ಎಲ್ಲರ ಬ್ರಹ್ಮಚರ್ಯಕ್ಕೂ ದೇವರೇ ಆಧಾರ. ಅಂತೇ ನಮಗೆ ನಮ್ರತೆಬೇಕು. ನಮ್ಮನ್ನು ನಾವು ನಂಬಬಾರದು. ಹುಟ್ಟುತ್ತಲೇ ನಿರ್ವಿಕಾರನಾಗಿದ್ದ ಮನುಷ್ಯ ಇಲ್ಲವೇ ಇಲ್ಲ. ಇಲ್ಲ ಪರಮೇಶ್ವರನಾಗ ಬೇಕು, ಇಲ್ಲವೆ ಗಂಡುತನ ಹೆಣ್ಣುತನವಿಲ್ಲದ ರೋಗಿಯಾಗಬೇಕು. ಪರಮೇಶ್ವರನಿಗೆ ಅಭಿಮಾನ ಎಲ್ಲಿಯದು? ಕಲ್ಲಿಗೆ ಕಲ್ಲೆಂಬ ಅಭಿಮಾನ ಇರಬಹುದೇ? ರೋಗಿಗೆ ರೋಗದ ಅಭಿಮಾನ ಸಲ್ಲದು. ವಿಕಾರನಿಗ್ರಹ ಶಕ್ತಿ ಗಂಡುಹೆಣ್ಣಿಗೆ ಸಾಧ್ಯವಿದೆ. ಈ ಶಕ್ತಿಸಂಗ್ರಹದ ಸದುಪಯೋಗವೂ ಆದೀತು. ಅಭಿಮಾನ ಪಟ್ಟರೆ ಈ ಶಕ್ತಿ ನಷ್ಟವಾಗುತ್ತದೆ. ನಿನ್ನ ಬ್ರಹ್ಮ ಚರ್ಯ ಬಲ ಹೇಗೆ ಕ್ಷಯವಾಗುತ್ತಿದೆಯೋ ನಿನಗೇನು ಗೊತ್ತು? ನಿನ್ನ ಬ್ರಹ್ಮಚರ್ಯದಲ್ಲಿ ನ್ಯೂನತೆಯಿದೆ. ನೀನೇ ಹೇಳು, ನಿನ್ನಲ್ಲಿ ಸ್ವಾಭಾವಿಕ ವೆಷ್ಟು, ಅಸ್ವಾಭಾವಿಕವೆಷ್ಟು? ನಿನಗೆ ವಿಕಾರಪರಿಚಯವೇ ಇಲ್ಲ ಎನ್ನಲು ನೀನೇನು ದೇವಿಯೆ? ದೇವಿಯ ಲಕ್ಷಣವೇ ಬೇರೆ. ನೀನು ದೇವಿ ಯಲ್ಲ. ನಿನಗೆ ರೋಗವೂ ಇಲ್ಲ. ನಿನ್ನ ಪರೀಕ್ಷೆ ನೀನೇ ಮಾಡಿಕೋ. ನನಗೆ ಬರೆ.

೨-೪-೩೩

ಬಾಪೂನ ಆಶೀರ್ವಾದ

೬೧

ನಿನ್ನ ಕಾಗದ ಬಂತು. ಅಪಾಯದ ಸೂಚನೆ ಕೊಟ್ಟಿದೇನೆ. ಅಷ್ಟು ಸಾಕು. ನಿನ್ನ ಕಾಗದ ನಾನು ಸರಿಯಾಗಿ ಓದುವುದಿಲ್ಲ ಎನಿಸಿದೆ ನಿನಗೆ. ಅದು ತಪ್ಪು ನಿನ್ನ ಅಭಿಪ್ರಾಯ ಸರಿಯಾಗಿ ತಿಳಿದುಕೊಂಡಿದ್ದೆ. ನಿನ್ನ ಆತ್ಮವಿಶ್ವಾಸದಲ್ಲಿ ದುರಭಿಮಾನ-ಗರ್ವ-ತುಂಬಿದೆ. ನಿನ್ನ ದುರಭಿಮಾನ

ಮಾತಿನಲ್ಲಿಯೆ ಕಾಣುತ್ತಾ ಇದೆ. ಹೀಗೆಂದರೆ ನಿನ್ನ ವಿಚಾರವನ್ನೂ ಮರೆಮಾಚಬೇಕೆಂದಾಗಲಿ ಚೆಂದಕಾಣುವಂತೆ ಸವರಿಸಬೇಕೆಂದಾಗಲಿ ನನ್ನ ಅರ್ಥವಲ್ಲ. ನಿನಗೆ ಅನಿಸಿದಂತೆಯೆ ನೀನು ಬರೆ; ಅದೇ ನನಗೆ ರುಚಿ. ಅಂತರ್ಬಾಹ್ಯದಲ್ಲಿ ನೀನು ಹೇಗಿದ್ದೀಯೋ ನಿನ್ನ ಕಾಗದ ಕನ್ನಡಿಸಲಿ. ನೀನು ಕೃತ್ರಿಮಳಾದರೆ ನಾನು ಏನೂ ಹೇಳಲಾರೆ.

ಕಷ್ಟ ನನಗೆ ರೂಢಿಯಾಗಿದೆ. ದೇವರು ಸಾವಿರ ರೀತಿಯಲ್ಲಿ ನನ್ನನ್ನೂ ಪರೀಕ್ಷಿಸುತ್ತಿದಾನೆ. ಅಭ್ಯಾಸವಾಗದೆ ಒಂದು ರೂಪು ಹೇಗೆ ಬಂದೀತು. ನೀನು ಕರ್ತವ್ಯಪಾಲನೆ ಮಾಡುತ್ತಿಲ್ಲ ಎನಿಸುತ್ತಿದೆ ನನಗೆ. ನಿನ್ನ ಗಂಟಲಿಗೆ ವಿರಾಮಕೊಡು ಎಂದು ಮೊದಲಿಂದಲೂ ನಿನಗೆ ಹೇಳುತ್ತಿದೇನೆ. ಶರೀರಕ್ಕೂ ವಿಶ್ರಾಂತಿಕೊಡಲು ಹೇಳಿದ್ದೆ. ಇವೆರಡೂ ಹುಕುಮನ್ನು ಮೀರಿದ್ದೀ. ಈ ಅಪ್ಪಣೆಗಳಲ್ಲಿ ಸ್ವಾರ್ಥ ನಿನ್ನದಲ್ಲ, ಆಶ್ರಮದ್ದು. ನಿನ್ನ ದನಿ ಕೆಟ್ಟೇ ಹೋಯಿತು. ಮೈ ಬಳಲಿತು. ಇದರಲ್ಲಿ ನಷ್ಟ ನಿನಗಿಂತ ಆಶ್ರಮಕ್ಕೇ ಹೆಚ್ಚು. ಈ ಸರಲಸತ್ಯ ನಿನಗೆ ತಿಳಿಯುತ್ತದೆಯೇನು? ಇದು ತಿಳಿದರೆ ನಮ್ರತೆಯಿಂದ ನಿನ್ನ ಮೈ ಕಾಪಾಡಿಕೋ. ಮೈ ಕಾಪಾಡಲು ಹೇಳಿದ್ದನ್ನು ಮಾಡು. ಸಿಟ್ಟಿಗೂ ಇದೇ ಮಾತೇ. ಅದೂ ಒಂದು ರೋಗವೇ. ಅದನ್ನೂ ಕಳೆದುಕೋ. ಅಧೀರತೆಯೂ ಹೋಗಲಿ.

೧೦-೪-೩೨

ಬಾಪೂನ ಆಶೀರ್ವಾದ.

## ೬೨

ರಜಃಕಣವಾಗುವ ಪಾಠ ನಾನು ಕಲಿಸಲಾರೆ. ದೇವರನ್ನರಿತವನು ತನ್ನಷ್ಟಕ್ಕೆ ತಾನೇ ರಜಃಕಣವಾಗುತ್ತಾನೆ. ಇದು ಸಾಧ್ಯವಾದಾಗ ಆಗಲಿ.

ನನ್ನ ಸುತ್ತ ನಿನ್ನ ವಿರುದ್ಧ ಗಾಳಿ ಬೀಸುತಿದೆ ಎನ್ನುತ್ತೀಯೆ. ಅದು ತಪ್ಪು. .....ನಿನ್ನ ವಿಷಯವಾಗಿ ಹೇಳಿದ್ದು ಹೊಸದೇನಲ್ಲ. ನಿನ್ನ ಬೆಲೆ ಅವನಿಗೆ ಗೊತ್ತಿದೆ. ವಾಕ್ಸಂಯಮ ಒರುವ ತನಕ ನಿನಗೆ ಜವಾಬದಾರಿ

ಕೆಲಸ ಹೊರಿಸಬಾರದು ಎಂದು ಅವನ ಅಭಿಪ್ರಾಯ. ಹೀಗೆ ಅವನು ಹೇಳಿದ್ದು ಹೊಸದಲ್ಲ; ಮೊದಲಿಂದಲೂ ಹೇಳುತ್ತಲೇ ಇದಾನೆ. ನೀನು ಗಮನಿಸಿರಬೇಕು; ನಾನು ನನ್ನ ಮೂರೂ ಜನ ಜೊತೆಗಾರರೊಡನೆ ‡ ಮಾತಾಡುವುದು ಅಪರೂಪ. ಊಟಮಾಡಬೇಕಾದರೆ, ತಿರುಗಾಡಬೇಕಾದರೆ ಯಾವಾಗಲಾದರೂ ಒಂದೆರಡು ವಿನೋದದ ಮಾತು; ಅಷ್ಟೆ. ಪ್ರಸಂಗವಿದ್ದರೆಯೆ ಹೊರತು ವ್ಯಕ್ತಿವಿಷಯ ನಾವು ಚರ್ಚೆ ಮಾಡುವುದಿಲ್ಲ. ನನ್ನ ಕೆಲಸದಲ್ಲಿ ನನಗೆ ಇದಕ್ಕೆಲ್ಲ ಹೊತ್ತೇ ಸಿಗದು. ವೃಥಾ ಚರ್ಚೆಯಲ್ಲಿ ಶಕ್ತಿವ್ಯಯ ಮಾಡಿಕೊಳ್ಳಲು ಬಯಕೆಯಿಲ್ಲ. ನಿನ್ನ ವಿರುದ್ಧ ಗಾಳಿ ಸುತ್ತಲೂ ಇಲ್ಲ, ನನ್ನ ಮನಸಿನಲ್ಲೂ ಇಲ್ಲ. ನನ್ನ ಮಗಳು ಎಂದು ಭಾವಿಸಿ ನಿನಗೆ ಪೆಟ್ಟು ಕೊಡುತ್ತೇನೆ. ನೀನು ಪರಿಪೂರ್ಣಳಾಗಬೇಕು ಎಂದು ನನ್ನ ಇಷ್ಟ. ಅದಕ್ಕೇ ಹೀಗೆ ಮಾಡುತ್ತೇನೆ. ನನ್ನ ಟೀಕೆಯಿಂದ ನಿನಗೆ ನೋವೇಕೆ? ನಿನಗೆ ಸರಿತೋರಿದ್ದನ್ನು ತೆಗೆದುಕೊಳ್ಳಬೇಕು, ಉಳಿದದ್ದು ಬಿಡಬೇಕು. ನನ್ನ ಟೀಕೆಯಲ್ಲಿ ಅಜ್ಞಾನವೂ ಇರಬಹುದು, ನಿನ್ನ ಭಾಷೆ ನನಗೆ ತಿಳಿಯದೆ ಇರಬಹುದು.

ವಸ್ತು ಒಂದೇ ಆದರೂ ನೋಡುವವರ ನೋಟ ಬೇರೆಬೇರೆ. ಇದು ನಿಜ. ಒಂದು ಶಕ್ತಿಯ ಉಪಯೋಗ ಬೇರೆ ಬೇರೆ ರೀತಿಯಲ್ಲಿ ಆಗುತ್ತದೆ; ನಾವು ನೋಡುತ್ತೇವೆ.

ಹೆಂಗಸರು ಮಾಸಿಕಧರ್ಮದಲ್ಲಿದ್ದಾಗ ಅವರ ಪಾಲಿಗೆ ಯಾವ ಕೆಲಸವನ್ನೂ ನಿಯಮಿಸಬಾರದು. ಅದರಿಂದ ಅವರಿಗಾಗುವ ಕಷ್ಟ ಉಳಿದವರಿಗೆ ತಿಳಿಯುವುದಿಲ್ಲ. ಆಗ ಯಾವ ಬಗೆಯ ಕೆಲಸದ ಭಾರವೂ ಅವರ ಮೇಲೆ ಬೀಳಬಾರದು. ಅವರೇ ಇಷ್ಟಪಟ್ಟು ಮಾಡಿದರೆ ಮಾಡಲಿ. ಎಷ್ಟೋ ಜನ ಹೆಂಗಸರಿಗೆ ಮಾಸಿಕಧರ್ಮದ ಪರಿಣಾಮ ಗೊತ್ತಾಗುವುದಿಲ್ಲ. ಅವರು ಯಥಾಪ್ರಕಾರ ಕೆಲಸ ಮಾಡುತ್ತಲೇ ಇರುತ್ತಾರೆ. ಕೆಲವರಿಗೆ ಸಹಿಸಲಾಗದಷ್ಟು ಬಾಧೆಯಾಗುತ್ತದೆ. ಬಾಧೆಯಾಗದಿದ್ದರೂ ಶರೀರ ದುರ್ಬಲವಾಗುತ್ತದೆ. ಈ ಅವಕಾಶವನ್ನೂ ಸದುಪಯೋಗ

‡ ವಲ್ಲಭಭಾಯಿ, ಮಹದೇವ ದೇಸಾಯಿ, ಛಗನಲಾಲ ಜೋಷಿ.

ಮಾಡಿಕೊಂಡವರಿಗೆ ಹೊಸ ಶಕ್ತಿ ಮೂಡುತ್ತದೆ. ಈ ಮೂರು ನಾಲ್ಕು ದಿನ ಹೊಸ ಶಕ್ತಿಯ ಜನ್ಮಕಾಲ. ಆ ಕಾಲಕ್ಕೆ ಹೆಂಗಸನ್ನು ಯಾವ ಜವಾಬದಾರಿಯೂ ಇಲ್ಲದೆ ಸ್ವತಂತ್ರಳಾಗಿಡಬೇಕು. ಮಲಗಲಿಕ್ಕೆ, ನಿದ್ದೆಮಾಡಲಿಕ್ಕೆ ಅನುಕೂಲವಿರಬೇಕು. ಗೊತ್ತಿಲ್ಲದೆ ಎಷ್ಟೋ ಜನ ಹೆಂಗಸರು ಈ ಕಾಲದಲ್ಲಿಯೂ ಕೆಲಸ ಮಾಡುತ್ತಾರೆ. ಅವರಿಗೆ ಗೊತ್ತಿಲ್ಲ; ಅವರಿಗೆ ತಿಳಿಸುವುದು ಅವಶ್ಯ.

೧೨-೪-೩೩

ಬಾಪೂನ ಆಶೀರ್ವಾದ.

೬೩

ಆ ಹುಡುಗಿಯನ್ನೇಕೆ ಹೊಡೆದೆ? ಉಪಾಧ್ಯಾಯನಿ ಹುಡುಗಿಯ ರಲ್ಲಿ ಕ್ಷಮೆ ಬೇಡಿದರೆ ಸ್ವಾಭಿಮಾನಕ್ಕೆ ಕುಂದಕವಲ್ಲ, ವರ್ಧಕವಾ ದೀತು. ಹುಡುಗಿಯರಿಗೂ ಪ್ರೀತಿ ಹೆಚ್ಚಾದೀತು. ನೀನು ಮಾಡಿದ್ದು ತಪ್ಪೆನಿಸಿದರೆ ನೀನು ಆ ಹುಡುಗಿಯ ಕ್ಷಮೆ ಬೇಡು.

ಕೆಲಸ ಮಾಡುವುದರಲ್ಲಿ ಗಡಿಬಿಡಿಯೇಕೆ? ನಿಧಾನವಾಗಿ ಮಾಡಿ, ಅದರಿಂದ ತೃಪ್ತಳಾದರೆ ಕೆಲಸವು ಬೆಳೆದೀತು, ಚೊಕ್ಕಟತನವೂ ಬಂದೀತು. ಸಾವಿರಸಲ ನನಗಿದು ಅನುಭವವಾಗಿದೆ.

೧೭-೪-೩೩

ಬಾಪೂನ ಆಶೀರ್ವಾದ.

೬೪

ಬಲಗೈ ಬಹಳ ಸೋತಿದೆ. ಉಳಿದ ಬಲ ಹರಿಜನಕ್ಕೆ ಲೇಖನ ಬರೆ ಯಲುಬೇಕು. ಸಂಪೂರ್ಣ ವಿಶ್ರಾಂತಿ ನನಗೆ ಬೇಕಾಗಲಿಕ್ಕಿಲ್ಲ....ನಿನಗೆ ತೊಂದರೆ ಕೊಟ್ಟಾಳು. ಸಹನೆಯಿಂದ, ಪ್ರೀತಿಯಿಂದ ಆಕೆಯನ್ನು ತಿದ್ದ ಬಹುದು. ಆಕೆಗೆ ತಾಯ ನೆನಪು ಆಗದಂತೆ ನೋಡು. ಎದೆಗುಂದ ಬೇಡ. ಸೇವಕನಾಗಲಿ ಸುಧಾರಕನಾಗಲಿ, ಒಂದು ಗಳಿಗೆಯಾದರೂ ಎದೆಗುಂದಿದರೆ ಮುನ್ನಡೆಯಲಾರ. ಇದು ನಿನ್ನ ಮನಸಿನಲ್ಲಿ ನಾಟಲಿ;

ಇದನ್ನು ಕೋಣೆಯ ಗೋಡೆಯ ಮೇಲೆ ಬರೆದಿಡು; ತಾಯತ್ತು ಮಾಡಿ ಕೊರಳಿಗೆ ಕಟ್ಟಿಕೋ.

ಅಲ್ಲಿಂದ ಅನುಮತಿ ಬಂದ ಮೇಲೆ ನೀಲಾನಾಗಿಣಿ ಅಲ್ಲಗೆ ಬಂದಾಳು. ಅವಳು ಬಹಿರಂಗವಾಗಿಯೇ ವ್ಯಭಿಚಾರ ಮಾಡಿದಾಳೆ. ಎಷ್ಟೋ ಸಾಲ ಮಾಡಿದಾಳೆ; ಸುಳ್ಳಾಡಿದಾಳೆ. ಈ ಹೊತ್ತು ಸಾಧ್ವಿಯಾಗಿ ಕೂತಿದಾಳೆ. ಅದರಲ್ಲಿ ಕೃತ್ರಿಮತನ ಕಾಣಲಿಲ್ಲಿ. ತನ್ನ ದೋಷ ತನಗೆ ತಿಳಿದ ಮೇಲೆ ನಾನು ಹೇಳಿದಷ್ಟು ಮಾಡಿದಾಳೆ. ಅವಳ ಶುಭ ಸಂಕಲ್ಪದ ಪ್ರಕಾರ ಎಲ್ಲಾದರೂ ಇರಲು ಸಾಧ್ಯವಾದರೆ ಅದು ಆಶ್ರಮದಲ್ಲಿಯೇ. ಬೇರ ಕಡೆ ಹೋದರೆ ಬಾಡಿಹೋದಾಳು; ಸ್ವೇಚ್ಛಾಚಾರಿಯಾದಾಳು. ಅವಳಲ್ಲಿ ಬೇಕಾದಷ್ಟು ಶಕ್ತಿಯಿದೆ. ಎಷ್ಟೋ ವಿಷಯ ಗೊತ್ತಿದೆ. ಮಹಾಭಾರವನ್ನು ಚೆನ್ನಾಗಿ ಬಲ್ಲಳು. ಬಂದರೆ ಅವಳ ಗುರುತು ಮಾಡಿಕೋ; ಉಳಿದ ಸೋದರಿಯರಿಗೂ ಪರಿಚಯ ಮಾಡಿಕೊಡು. ಹಿಂದಿನ ಮಾತು ಆಕೆಗೆ ನೆನಪು ಮಾಡಬಾರದು. ಆಕೆಯೇ ಆ ಮಾತು ತೆಗೆದರೂ ಅದು ತಪ್ಪೇ. ವಿಷಯದ ನೆನಪು ಹಾನಿಕರ. ಹಿಂದಿನ ಸುದ್ದಿ ಹೇಳುವುದರಲ್ಲಿ ಆಕೆ ರುಚಿ ತೋರಿಸಿದರೆ ಇನ್ನೂ ಆಕೆಗೆ ವಿಷಯೋಚ್ಚಾಟನೆಯಾಗಿಲ್ಲ ಎನ್ನಬೇಕು. ಕಿರಿಯ ತಂಗಿ ಎಂದು ಅವಳನ್ನು ಭಾವಿಸಿ ಪ್ರೀತಿಯಿಂದ ನಡೆ. ಅವಳ ಜೀವನದ ವಿಷಯ ಬೇಕಾದರೆ ನನ್ನನ್ನು ಕೇಳು. ಅವಳು ಆಶ್ರಮಕ್ಕೆ ಬಂದಾಗ ಹೆಚ್ಚಾಗಿ ಬರೆಯಲು ಹೊತ್ತು ಸಿಗಲಿಕ್ಕಿಲ್ಲ ಎಂದು ಈ ಹೊತ್ತೇ ಇಷ್ಟು ಬರೆದಿದೇನೆ. ಆಕೆಯ ಮಗ ಬಹಳ ಚೆನ್ನಾಗಿದಾನೆ.

೨೪-೩-೩೨

**ಬಾಪು.**

**೬೫**

ಈ ನಡುವೆಯ ನಿನಗೊಂದು ಕಾಗದ ಬರೆದಿದ್ದೆ. ವಾತಾವರಣ ಬಹಳ ಅಸ್ಥಿರವಾಗುತ್ತ ನಡೆದಿದೆ. ನಿನ್ನ ವಿಷಯವಾಗಿಯೂ ಆಗಾಗ ವಿಚಾರ ಬರುತ್ತದೆ. ನಿನಗೆ ಕಲಿಸುವ ಇಷ್ಟವೂ ಇಲ್ಲ, ನಿನ್ನೊಡನೆ ವಾದಮಾಡುವ ಶಕ್ತಿಯೂ ಉಳಿದಿಲ್ಲ. ಗಜೇಂದ್ರನಂತೆ ಆಗಿದೇನೆ.

ಸೊಂಡಿಲು ಮಾತ್ರ ಹೊರಗಿದೆ, ಅದೂ ನೀರೊಳಗೆ ಮುಳುಗಿದರೆ ಉಸಿರು ನಿಂತಹಾಗೆಯೇ. ಅಂತೇ ಯಾರ ವಿಷಯವನ್ನೂ ವಿಚಾರ ಮಾಡದೆ ಸುಮ್ಮನೆ ಪ್ರಾರ್ಥನೆ ಮಾಡುವುದು ಮಾತ್ರವೇ ನನ್ನ ಕೆಲಸ. ಯಾರನ್ನು ಪ್ರಾರ್ಥಿಸಲಿ? ಯಾರು ಸದಾಜಾಗ್ರತನೋ, ಯಾರಿಗೆ ತಿಲಮಾತ್ರವೂ ಆಲಸ್ಯವಿಲ್ಲವೋ, ಯಾರು ಉಗುರಿಗಿಂತ ಸಮೀಪವೋ ಅವನಿಗೆ ಎಲ್ಲವೂ ಕೇಳಿಸುತ್ತದೆ, ಕಾಣುತ್ತದೆ; ನನ್ನ ಪ್ರಾರ್ಥನೆ ಅವನಿಗೆ ಗೊತ್ತೇ ಇದೆ.

ಅವನ ಆಧಾರಬಲದಿಂದ ಈ ಸೊಂಡಿಲು ಮಾತ್ರ ನೀರ ಮೇಲೇ ಇದೆ. ಅವನಿಗೆ ಬೇಕಾದುದು ಮಾಡಲಿ. ತನ್ನ ಮನಸಿಗೆ ಒಪ್ಪಿದಂತೆ ನನ್ನನ್ನು ಇಡಲಿ.

೨೪-೬-೩೨

ಬಾಪು.

೬೬

ನನ್ನ ಉಪವಾಸ ಆಶ್ರಮವಾಸಿಗಳೆಲ್ಲರಿಗಾಗಿಯೂ, ನಿನಗಾಗಿಯೂ. ಇದನ್ನು ತಿಳಿದುಕೊಂಡು ನಿನ್ನ ರೋಗಗಳನ್ನು ನೀನು ಗುಣ ಮಾಡಿಕೋ.

ನಿನ್ನ ಪ್ರಶ್ನಾವಳಿ ನಿನ್ನಲ್ಲಿರಬಹುದು. ಬರೀ ಉತ್ತರಗಳನ್ನೇ ಕಳಿಸುತ್ತೇನೆ. ಇಂದು ನನಗೆ ಹೊತ್ತು ಸಾಲದು.

೧. ಚಿಕ್ಕವರಿಗಾಗಲಿ ದೊಡ್ಡವರಿಗಾಗಲಿ ವಿನಯದಿಂದ ತಿಳಿಸಿಕೊಡಲು ನಮಗೆ ಬಾರದಿದ್ದರೆ ಮೌನದಿಂದ ಅವರಿಗಾಗಿ ಪ್ರಾರ್ಥನೆ ಮಾಡಬೇಕು. ಇದರಿಂದ ನಿನ್ನ ಅವಸರದ ಸ್ವಭಾವ ತಗ್ಗೀತು.

೨. 'ಆವಶ್ಯಕ' ಎಂಬುದರ ಲಕ್ಷಣ ತಿಳಿದುಕೊಳ್ಳಬೇಕಾದದ್ದು ಅಗತ್ಯ. ನಾನು ಒಂದು ಶ್ಲೋಕ ಹೇಳುತ್ತಿದ್ದೇನೆ. ನನಗೊಂದು ಹಾವು ಕಂಡಿತು. ಹಾವನ್ನು ಹಿಡಿಯುವುದು ಅಗತ್ಯ. ಎಂದರೆ ಶ್ಲೋಕ ಹೇಳುವ ನಿಯಮ ಮುರಿಯಬೇಕು. ಅಥವಾ ಆಗ ನನಗೆ ಶೌಚಕ್ಕೆ ಅವಸರವಾಯಿತು. ನಿಯಮಭಂಗ ಮಾಡಬೇಕು. ನೀರಡಿಕೆಯಾಯಿತು, ಅದನ್ನು ತಡೆದು ಶ್ಲೋಕ ಮುಂದೆ ಸಾಗಿಸಬೇಕು. ಆದರೆ ಗಂಟಲಲ್ಲಿ ಏನಾದರೂ ಹುಣ್ಣಾದರೂ ಶ್ಲೋಕ ಸಾಗಿಸಿದರೆ ಹುಚ್ಚಲ್ಲ ಬೆಪ್ಪು ಎಂದಾರು.

೩. ಸತ್ಯಶೋಧನೆಗೆ ಲೋಕಾಚಾರ ಅಡ್ಡಬಂದರೆ ಅದನ್ನು ಕಿತ್ತೊಗೆಯಬೇಕು.

೪. ನನ್ನ ಬಗ್ಗೆ ಅನನ್ಯಶ್ರದ್ಧೆಯಿದ್ದರೆ ಕೇಳು; ನೀನು ಅಂತಃಪ್ರೇರಣೆಯೆಂಬದು ತಪ್ಪಿರುವ ಸಂಭವವಿದೆ. ಶ್ರದ್ಧೆಗೂ ಮೀರಿ ನಿನ್ನ ಅಂತಃಪ್ರೇರಣೆ ಪ್ರತ್ಯಕ್ಷಾನುಭವವಾಗಿದ್ದರೆ ಎಂಥ ಸಂಕಟ ಬಂದರೂ ಹಿಂದೆಗೆಯದೆ ಸಾಗಬೇಕು.

೫. ಇದಕ್ಕೆ ಒಂದೇ ಉತ್ತರ ಇಲ್ಲ. *

೬. ಈ ಪ್ರಶ್ನೆ ನನಗೆ ತಿಳಿಯಲಿಲ್ಲ. †

೭. ಯಾರಾದರೂ ಒಬ್ಬನು ಸುಳ್ಳ, ಸೋಮಾರಿ ಆಗಿದ್ದಾನೆಂಬದು ಪದೇ ಪದೇ ಕಂಡು ಬಂದ ಮೇಲೆಯೇ, ಅವನು ಹಾಗಿರಬಹುದೆಂಬ ಅನುಮಾನ ಸತ್ಯಾರ್ಥಿಯಾದವನ ಮನಸಿನಲ್ಲಿ ಬರಬಲ್ಲದು. ಹಾಗೆ ಅನುಮಾನ ಬಂದ ಮೇಲೆಯೂ ಸತ್ಯಾರ್ಥಿಗೆ ಅವನ ಮೇಲೆ ಪ್ರೀತಿಯಿದ್ದೇ ಇರುತ್ತದೆ. ಅವನಿಗೆ ಅವಕಾಶವನ್ನೂ ಕೊಡುತ್ತಾನೆ.

೮. ಸಾರ್ವತ್ರಿಕವಾದ ಒಂದೇ ನಿಯಮ ಈ ವಿಷಯದಲ್ಲಿಲ್ಲ. ಪ್ರತಿಯೊಬ್ಬನ ಮನಸಿನ ಮೇಲೆ ಅವಲಂಬಿಸಿದೆ. ಕಲೆಯ ಭ್ರಾಂತಿಯಿಂದ ಸರಳತನ ಬಿಡಬಾರದು. §

೯. ಇದಿರುತ್ತರ ಪ್ರತ್ಯುತ್ತರ ನಡಸುವುದೇ ನಿಂದ್ಯವಾದುದು. 'ನೀನಿನ್ನೇನು ಮಹಾ' ಎನ್ನುವುದು ಕೀಳುತನ.

೧೦. ಅಹಿಂಸೆಯ ಗರ್ಭದಲ್ಲೇ ಇದು ಇದೆ. ‡

* ಸಂಸ್ಥೆಯ ಮೂಲಕ ವ್ಯಕ್ತಿಪ್ರಿಯವೋ, ವ್ಯಕ್ತಿಮೂಲಕ ಸಂಸ್ಥೆಪ್ರಿಯವೋ?

† ಪರರ ವಿಷಯವಾಗಿ ನಮ್ಮ ಮನಸಿನಲ್ಲಿ ಕೆಟ್ಟ ಭಾವನೆ ಬಂದಾಗ ಅದನ್ನು ತಿಳಿದುಕೊಳ್ಳುವ ಮೇರೆ ಏನು?

§ ಸಾದಾ ಜೀವನದ ಬೇಲಿ ಎಲ್ಲಿಗೆ ಹಾಕಬೇಕು? ಬೆಡಗಿನ ಕುಪ್ಪಸ ತೊಡುವುದು, ತಲೆಗೋ ಕತ್ತಿಗೋ ಹೂವು ಹಾಕಿಕೊಳ್ಳುವುದು, ಅಲಂಕಾರದ ಮೆಟ್ಟು ಬಳಸುವುದು–ಮುಂತಾದುದು ಕಲಾಭಿಜ್ಞತೆಯೋ, ಇಲ್ಲ ಆಶ್ರಮತತ್ವಗಳ ಕೊಲೆಯೋ?

‡ ಆಶ್ರಮಕ್ಕೆ ಬರುವವರಿಗೆ ಬೇರೆ ಬೇರೆ ಉದ್ದೇಶಗಳಿರುತ್ತವೆ. ಅವರೆಲ್ಲ ಆಶ್ರಮಜೀವನವನ್ನು ಬೇರೆ ಬೇರೆ ರೀತಿಯಿಂದ ನೋಡಬೇಕು ತಾನೆ?

ನಿನ್ನ ಪ್ರಶ್ನಾವಳಿಯ ಪ್ರತಿಯನ್ನು ನಿನ್ನಲ್ಲಿ ಇಟ್ಟುಕೊಳ್ಳುವಷ್ಟು ಹೊತ್ತು ನಿನಗಿತ್ತೋ ಇಲ್ಲವೋ ಎಂದು ಅದನ್ನೂ ಇದರ ಜೊತೆಗೆ ಕಳಿಸುತ್ತಿದೇನೆ.

ಇಬ್ಬರು ಸೋದರಿಯರನ್ನಂತೂ ಕಳಿಸುತ್ತಿದೇನೆ. ಬಹಳ ಸಂಕೋಚವಾಗುತ್ತಿದೆ. ಧರ್ಮ ಎಂದು ಕಳಿಸುತ್ತ ಇದೇನೆ. ಅದರಿಂದ ನಿನ್ನ ಕೆಲಸ ಹೆಚ್ಚಾಗಲಾರದೆಂದು ಆಸೆ. ಅವರು ನಿನಗೆ ಸಹಾಯಕರಾದರೂ ಆಗಬಹುದು. ಅವರಿಗೆ ಹಿಂದೀ ಕಲಿಸುವ ಏರ್ಪಾಡು ಮಾಡು.

ಸುಶೀಲೆ ರಜೆಯನ್ನು ಆಶ್ರಮದಲ್ಲಿಯೇ ಕಳೆಯಲೆಂದು ನನಗೆ ಇಷ್ಟ. ಅದರಿಂದ ನಿಮ್ಮಿಬ್ಬರಿಗೂ ಸ್ವಲ್ಪ ವಿರಾಮ ದೊರೆತೀತು. ಕೆಲಸ ಬದಲು ಮಾಡುವುದೇ ವಿರಾಮ-ಗೊತ್ತಿರಬೇಕಲ್ಲ ನಿನಗೀ ಗಾದೆ. ಇದರಲ್ಲಿ ಸತ್ಯ ಬಹಳ ಇದೆ.

ಬರೆಯುವಾಗ ಸಹಜವಾಗಿ ತೋರಿದ ವಿಚಾರ ಇವು. ಸುಶೀಲೆ ಬೇರೆ ಕಾರ್ಯಕ್ರಮ ನಿಶ್ಚಯಿಸಿಕೊಂಡಿದ್ದರೆ ನನಗಾಗಿ ಅದನ್ನೂ ಬಿಡಬಾರದು.

೧-೫-೩೩

ಬಾಪು

## ೬೭

ನಿನ್ನ ಕಾಗದಕ್ಕೆ ನನ್ನ ಕಾಗದ ದಾರಿಯಲ್ಲೇ ಇದಿರಾಗಿರಬೇಕು. ಇಬ್ಬರೂ ನಿನ್ನೆಯೇ ಬರೆದದ್ದು. ನಮ್ಮೆಲ್ಲರ ಆಯುಷ್ಯ ಎತ್ತಲೋ ಅಂತೂ ಸಾಗಿದೆ. ನಾವು ಚಿಕ್ಕವರಾಗುತಿದೇವೆ ಎಂದರೆ ಸರಿಯಾದೀತಲ್ಲವೆ? ಕಳೆದು ಹೋದದ್ದು ಆಯುಷ್ಯದಲ್ಲಿ ಕಡಮೆಯಾದಂತೆ. ಅಷ್ಟುಮಟ್ಟಿಗೆ ನಾವು ಚಿಕ್ಕವರಾದ ಹಾಗೆ. ತಾತ್ಪರ್ಯ ಇಷ್ಟೇ-ನಾವು ಹೆಚ್ಚು ಹೆಚ್ಚು ಜಾಗ್ರತರಾಗಬೇಕು. ನಮ್ಮ ಕೈಗೆ ಕೊಟ್ಟ ಬಂಡವಾಳ ಕ್ಷೀಣಿಸುತ್ತಿದೆ. ಉಳಿದದ್ದನ್ನಾದರೂ ಸರಿಯಾಗಿ ಉಪಯೋಗ ಮಾಡಲು ಕಲಿಯೋಣ. ನಿನಗೂ ಇದೇ ಮಾತು.

೧-೭-೩೩

ಬಾಪು

**೬೮**

ಈ ದಿನ ಬರೆಯುತ್ತಿರುವುದಕ್ಕೆ ಕಾರಣ ಎರಡು.....ಳ ಪ್ರೇರಣೆ ಒಂದು; ಅವಳು ಹೇಳಿದ ಸುದ್ದಿ, ಎರಡು. ನನ್ನ ನಿರ್ಣಯ * ಕೇಳಿ ನೀನು ಮೂರುದಿನ ಅತ್ತೆ. ಈ ನಿರ್ಣಯ ಕೇಳಿ ನಿನಗೆ ಪೆಟ್ಟು ತಗಲೀತು ಎನಿಸಿತ್ತು ನನಗೆ. ಆದರ ಜೊತೆಯಲ್ಲೇ ನಿರ್ಣಯ ಕೇಳಿ ಕುಣಿದಾಡೀಯೆ, ಹಾಡೀಯೆ ಎನಿಸಿತ್ತು. ಅದರ ರಹಸ್ಯ, ಮಹತ್ವ, ಶುದ್ಧ ಸತ್ಯ ನಿನಗೆ ತಿಳಿಯದೆ ಹೋಗಲಾರದು. ಆ ಮಾತು ಯೋಗ್ಯವೋ ಅಯೋಗ್ಯವೋ ನಮ್ಮ ದಿನದಿನದ ಅನುಭವವೇ ಪ್ರಮಾಣ. ಸಹಕಾರಿಗಳು ಅಯೋಗ್ಯರೆಂಬ ಮಾತು ಅದರಲ್ಲಿಲ್ಲ. ಯಾರೂ ಅಯೋಗ್ಯರಲ್ಲ. ಏನು ನಡೆಯಿತೋ ಅದು ಮುಂದೆ ಬರುವುದರ ಕಣ್ಸನ್ನೆ. ಆದರಿಂದ ಇಂಥ ನಿರ್ಧಾರಕ್ಕೆ ಬರಲು ನನಗೆ ಪ್ರೇರಣೆಯಾಯ್ತು. ಹೊತ್ತು ಬಂದಾಗ–ಬಂದೇ ಬಂದೀತು–ಇದೇ ಸಹಕಾರಿಗಳೇ ಹೋರಾಡಿಯಾರು. ಸಾರಾಂಶ, ಹೆಚ್ಚು ಬಲ, ಹೆಚ್ಚು ಸಂಯಮ ಗಳಿಸುವುದು. ಈ ಹೊತ್ತು ಕೆಲಸಕ್ಕೆ ಬರಲಿಲ್ಲವೆಂದು ನನ್ನ ಶಸ್ತ್ರಗಳು ಅಯೋಗ್ಯವಲ್ಲ. ಅವನ್ನು ಇನ್ನೂ ಮಸೆಯಬೇಕಾಗಿದ್ದೀತು. ಉಪಯೋಗಿಸಿದ್ದು ಸಕಾಲವಿರಲಿಕ್ಕಿಲ್ಲ. ಇದಕ್ಕಿಂತ ಹೆಚ್ಚು ತಿಳಿಸಿಹೇಳಲಾರೆ. ಹೊರಗೆ ಬಂದ ಕೂಡಲೆ ನಾನೆಲ್ಲಿರುತ್ತೇನೋ ಹುಡುಕಿಕೊಂಡು ಬಾ. ಈ ವಿಷಯ ತಿಳಿಯದಿದ್ದರೆ ಮನದಣಿಯೆ ಜಗಳವಾಡು ನನ್ನ ಸಂಗಡ. ಈ ನಿರ್ಣಯ ಎಲ್ಲರಿಗೂ ಒರೆಗಲ್ಲು; ನನಗೂ ಕೂಡ. ದೇವರ ದಯೆಯಿಂದ ನಾವೆಲ್ಲ ಉತ್ತೀರ್ಣರಾಗಬೇಕು.

ಪಾಟನಾಕ್ಕೆ ಹೋಗುವಾಗ ರೈಲಿನಲ್ಲಿ ಬರೆದದ್ದು ಈ ಕಾಗದ. ಈ. ಐ. ರೇಲವೆಯ ಡಬ್ಬಿಯಲ್ಲಿ ಬರೆಯಲು ಏನೂ ಕಷ್ಟವಿಲ್ಲ. ಗಾಡಿ ಅಷ್ಟು ಸಲೀಸಾಗಿ ಹೋಗುತ್ತದೆ.

೧೭-೫-೩೪

**ಬಾಪೂನ ಆಶೀರ್ವಾದ.**

---

* ಸತ್ಯಾಗ್ರಹ ನಿಲ್ಲಿಸಿದ ನಿರ್ಣಯ.

೬೯

ನಿನ್ನ ಕಾಗದ ಬಂತು. ಪ್ರಾರ್ಥನೆಗೆ ಮೊದಲು ಈ ಕಾಗದ ಬರೆಯುತ್ತಿದ್ದೇನೆ. ಹೀಗೆ ಬರೆದದ್ದು ನಿನಗೊಂದು ಉಪಕಾರ ಎಂದಲ್ಲ. ಬೆಳಗು ಮುಂಜಾನೆ ಎದ್ದು, ವಾಡಿಕೆಯಂತೆ ನನ್ನ ಕೆಲಸಕ್ಕೆ ತೊಡಗುತ್ತೇನೆ ಎಂಬದನ್ನು ತೋರಿಸಲು ಬರೆದೆ. ಇಡೀ ದಿವಸ ಕಾಗದ ಬರೆಯಲು ಸಾಕಷ್ಟು ಬಿಡುವು ಸಿಗುವುದಿಲ್ಲ. ನನ್ನನ್ನು ಯಾರೂ ಎಬ್ಬಿಸುವುದಿಲ್ಲ. ಅಲಾರಂ ಕೂಡಾ ಇಲ್ಲ. ನನ್ನಷ್ಟಕ್ಕೆ ನಾನೇ ಏಳುತ್ತೇನೆ. ಮಲಗಲು ಬಿಸಿಲುಮಾಳಿಗೆ (ಗಚ್ಚಿ) ಇದೆ.

ನೀನು ಕೆಲಸ ಬೆಳೆಸುತ್ತಾ ಇದ್ದಂತಿದೆ. ಸ್ವಲ್ಪ ಮಾಡಬೇಕು, ಆದರೆ ಚೆನ್ನಾಗಿ ಮಾಡಬೇಕು ಎಂದು ನನ್ನ ಅಭಿಪ್ರಾಯ. ಹಳ್ಳಿಯ ಕೆಲಸದಲ್ಲಿ ಅವಸರ ಉಪಯೋಗವಿಲ್ಲ. ಹರಿಜನ-ಹರಿಜನಬಂಧು, ಇವೆರಡನ್ನೂ ತಪ್ಪದೆ ಓದುತ್ತಿರು. ಬೇರೆ ವಿಷಯಗಳ ಚರ್ಚೆ ಕೂಡ ಅದರಲ್ಲಿ ಬರುತ್ತದೆ.

'ಗೀತಾಯಿ' ಪ್ರತಿ ಬೇಕಾದರೆ ಕಳಿಸುತ್ತೇನೆ. ನನ್ನ ನಿವೇದನದ* ಒಗ್ಗೆ ನಿನಗೇನಾದರೂ ತೋರಿದರೆ ಒರೆ.

ವರ್ಧಾ, ೨೦-೯-೩೪

ಬಾಪೂನ ಆಶೀರ್ವಾದ.

೭೦

ನಿನ್ನ ಕಾಗದದ ತುಂಬಾ ವರ್ಣನೆಯೇ. ಕೆಲಸ ಚೆನ್ನಾಗಿ ನಡೆದಿರಬೇಕು. ಹೀಗೆಯೇ ವರದಿ ಕಳಿಸುತ್ತ ಬಾ.

ಹಳ್ಳಿಯಲ್ಲಿ ಕೆಲಸ ಮಾಡುವುದರ ಬಗ್ಗೆ 'ಹರಿಜನ' ದಲ್ಲಿ ಬರೆದಿದ್ದೇನೆ. ಒಂದೇ ರೀತಿ ಎಲ್ಲ ಕಡೆಯಲ್ಲೂ ಕೆಲಸಕ್ಕೆ ಬಾರದು. ಇದು ಉಳುಮೆಯಿಲ್ಲದ ನೆಲ. ಆದ್ದರಿಂದ ಬಹಳ ವೈವಿಧ್ಯ ಇರುವ ಸಂಭವವಿದೆ. ಹರಿಜನದಲ್ಲಿ ಕೊಟ್ಟ ನನ್ನ ಯೋಜನೆ ಒಂದೇ ಪ್ರಕಾರದ್ದು. ಈ

* ಗಾಂಧೀಜೀ ಕಾಂಗ್ರೆಸಿನಿಂದ ಹೊರಬಿದ್ದಾಗ ಹೊರಡಿಸಿದ ನಿವೇದನೆ.

ಗುಟುಕು ಯಾರಿಗೆ ಕುಡಿಸಲಿ? ನಿನಗೇ ತಾನೆ! ನೀನೆಷ್ಟು ಜನಕ್ಕೆ ಕುಡಿಸುತ್ತೀಯೋ ನೋಡೋಣ. ನಿನ್ನ ತೊಂದರೆಗಳನ್ನು ನೋಡಿ ನನಗೆ ಆಶ್ಚರ್ಯವಾಗದು. ಕಾಂಗ್ರೆಸಿನ ಹೆಸರು ಕೂಡ ಉಪಯೋಗ ಮಾಡಬಾರದೆಂದು ನನ್ನ ಸಲಹೆ. ಸವಿನಯ ಭಂಗದ ಮಾತಂತೂ ದೂರ ಉಳಿಯಿತು. ನೀನು ಈಗ ಮಾಡುತ್ತಿರುವ ಕೆಲಸದ ಗುಣದೋಷಗಳನ್ನು ಗ್ರಾಮವಾಸಿಗಳಿಗೆ ತಿಳಿಸಬೇಕು. ಅದರ ಕೆಲಸ ಮಾಡದೆಯೆ ಕಾಂಗ್ರೆಸಿನ ಹೆಸರು ಬಳಸುವುದು ಅನವಶ್ಯಕ. ಕೃಷ್ಣಕೃಷ್ಣ ಎಂದ ಮಾತ್ರಕ್ಕೆ ಭಕ್ತನಲ್ಲ. ಅವನ ಸೇವೆ ಮಾಡಿದವನೇ ಭಕ್ತ. ಅನ್ನಅನ್ನ ಎಂದರೆ ಹೊಟ್ಟೆ ತುಂಬೀತೇ? ಅನ್ನ ತಿಂದರೆಯೆ ಹೊಟ್ಟೆ ತುಂಬೀತು.

ನಿನಗೆ ಅನಿಸಿದ್ದು ಸರಿ. ಹಳ್ಳಿಯನ್ನು ಬಿಡಲು ಅಪ್ಪಣೆಯಾದರೆ ಸಂತೋಷದಿಂದ ಪಾಲಿಸಬೇಕು. ತನಗೆ ಒಪ್ಪಿಗೆಯಿಲ್ಲದ ಕಾಯದೆಯನ್ನು ಕೂಡ ಪಾಲನೆ ಮಾಡುವವನಿಗೇ ಒಮ್ಮೊಮ್ಮೆ ಕಾಯದೆಭಂಗ ಮಾಡುವ ಅಧಿಕಾರ ಬರುತ್ತದೆ. ಜನರಿಗೆ ಇದು ಗಮನಕ್ಕೆ ಬರುವುದು ಕಡಮೆ.

ನಾನು ಮತ್ತೆ ಕಾಂಗ್ರೆಸಿಗೆ ಸೇರುತ್ತೇನೆಂದು ತಿಳಿದುಕೊಳ್ಳಲು ಕಾರಣವಿಲ್ಲ. ಮನಸಿನಲ್ಲಿ ಎಷ್ಟೋ ಮಾತು ತಳಮಳ ಕುದಿಯುತ್ತಿವೆ. ಅವನ್ನೆಲ್ಲ ಬರೆಯಲು ಈಗ ವೇಳೆಯಿಲ್ಲ. ಆಗುವುದನ್ನೆಲ್ಲ ನೋಡುತ್ತಿರು. ನಿನ್ನ ಕೆಲಸಕ್ಕೆ ಒಂದು ಯೋಜನೆಯಿದೆ ಎಂಬುದೇ ಸಾಕು.

ಅಮ್ತುಲ್ ಸಲಾಮಳಿಗೆ ನೀನು ಬರೆದ ಉರ್ದು ಕಾಗದ ಚೆನ್ನಾಗಿದೆ.

೩-೯-೩೪ ವರ್ಧಾ. ಬೆಳಗು ೩ ಗಂಟೆ.

**ಬಾಪೂನ ಆಶೀರ್ವಾದ.**

೭೧

ನಿನ್ನ ಕಾಗದ ತಲುಪಿತು. ನಿನ್ನ ಔದಾರ್ಯಕ್ಕೆ ಪಾರವೇ ಇಲ್ಲ. ನಾನು ಬರೆಯದಿದ್ದರೂ ಪರವಾಯಿಲ್ಲ ಎನ್ನುತ್ತೀ. ನಿನ್ನೀ ಔದಾರ್ಯವನ್ನು ಈಗ ಉಪಯೋಗಿಸಿಕೊಳ್ಳುವ ಮನಸ್ಸಿಲ್ಲ. ಆದರೂ ಧನ್ಯವಾದ ಕೊಡಲೇಬೇಕು.

ಆಶ್ರಮವನ್ನು ಯಾರಾದರೂ ತೆಗಳಿದರೆ ನನಗೆ ದುಃಖವಿಲ್ಲ. ಯಾಕೆ ಆಶ್ರಮವನ್ನು ನಾನು ಸುಟ್ಟು ಹಾಕಿದೆನೋ ಹೇಳಿದರೆ ಯಾರೂ ಅದನ್ನು ಒಪ್ಪಲಿಲ್ಲವಲ್ಲ ಎಂದು ನನಗೆ ದುಃಖ. ಪವಿತ್ರವೇ ಅಲ್ಲದ್ದನ್ನು ಬಲಿದಾನ ಕೊಡುವುದೇನು ಬಂತು. ಈ ಮಾತು ನೀನು ಸರಿಯಾಗಿ ತಿಳಿಸಿರಬಹುದು. ಬಂದದ್ದನ್ನೆಲ್ಲಾ ಪ್ರಸನ್ನ ಚಿತ್ತರಾಗಿ ಅನುಭವಿಸೋಣ.

ನನ್ನ ಗಾಡಿ * ಚೆನ್ನಾಗಿ ಸಾಗಿದೆ. ಬಲ ಬರುತ್ತಿದೆ. ನೀನು ಬರೆಯುತ್ತಿರು.

೨೧-೯-೩೪

ಬಾಪೂನ ಆಶೀರ್ವಾದ.

೭೨

ನನ್ನ ನಿವೇದನವನ್ನು ಸರಿಯಾಗಿ ಅರ್ಥ ಮಾಡಿಕೊಂಡೆ. ನನಗೆ ಸಂತೋಷವಾಯಿತು. ನಿನ್ನ ಕೆಲಸ ವಿಕಾಸವಾಗುತ್ತಿರುವುದು ನನಗೆ ಕಾಣುತ್ತಿದೆ. ಅದರ ವಿಸ್ತಾರ ಬೆಳೆಸಬೇಡ. ಕೈಹಿಡಿದ ಕೆಲಸ ದೃಢವಾಗಿ ನಾಟಲಿ. ನಮ್ಮ ಈ ಕಂಗಾಲ ದೇಶದಲ್ಲಿ ಹುಲ್ಲಿನ ಬೀಜ ಬಿತ್ತಿಕೊಂಡು ಬದುಕುತಿದ್ದೇವೆ. ಗೋಧಿ ಕೂಡ ಹುಲ್ಲೇ. ಹಣ್ಣುಹಂಪಲು ಬೆಳೆವ ಧೈರ್ಯ ಕೂಡ ನಮಗಿಲ್ಲ. ಬಡವರಿಗಂತೂ ಅವು ಸಿಗುವುದೇ ಇಲ್ಲ. ಶ್ರೀಮಂತರೂ ಅದನ್ನು ಪೋಷಣೆಗಾಗಿ ಬಳಸುವುದಿಲ್ಲ; ಮುಖ ಶುದ್ಧಿಗಾಗಿ ಮಾತ್ರ ತಿನ್ನುತ್ತಾರೆ. ಸೇವಾಕ್ಷೇತ್ರದಲ್ಲೂ ನಾವು ಕಂಗಾಲರೇ; ಹುಲ್ಲಿನಿಂದಲೇ ನಮಗೆ ತೃಪ್ತಿ. ಈ ತಪ್ಪು ತಿದ್ದಿಕೊಂಡು ಕೆಲವಾದರೂ ಹಣ್ಣು ಬೆಳೆಸಿದರೆ ಮುಂದಿನ ಪೀಳಿಗೆಯ ಜನ ರುಚಿ ಸವಿದಾರು. ಈಗ ಇಷ್ಟೇ ಸಾಕು.

೫–೧೦–೩೪

ಬಾಪೂನ ಆಶೀರ್ವಾದ.

* ತಮ್ಮ ದೇಹವನ್ನು ಗಾಡಿಗೆ ಹೋಲಿಸುವುದು ಗಾಂಧೀಜಿಯ ರೂಢಿ.

೭೩

ನಿನ್ನ ಕಾಗದ. ನಿನ್ನ ಪ್ರಶ್ನೆಗೆ ಸಮಾಧಾನದ ಉತ್ತರ ಕೊಟ್ಟದ್ದೇ ನಿಜವಾದ ಬುದ್ಧಿವಂತಿಕೆಯ ಬಾವುಟ ಎಂದು ತಿಳಿಯಬಾರದು. ನನ್ನ ಸಿಟ್ಟು ನಿಮಗೆ ಯಾರಿಗೂ ತಿಳಿಯಲಾರದು. ಅದಕ್ಕೆ ಸಾಕ್ಷಿ ನಾನೇ. ......ಗೆ, ......ಗೆ ಅದು ಅನುಭವಕ್ಕೆ ಬಂದಿದೆ. ಅದು ಕೂಡ ನನ್ನ ನಿಜವಾದ ಸಿಟ್ಟಲ್ಲ. ನನ್ನಲ್ಲಿ ತುಂಬಿಕೊಂಡಿರುವ ಸಿಟ್ಟನ್ನು ಎಷ್ಟೋ ಪಾಲು ನಾನು ನುಂಗಿಕೊಳ್ಳುತ್ತೇನೆ. ನುಂಗಿ ನುಂಗಿ ಬಿಕ್ಕಿದ್ದು ಅವರಿಗೆ ಕಂಡಿರಬೇಕು. ಅಷ್ಟು ಮಾತ್ರವೂ ಕಾಣದಂತೆ ನಾನು ನಡೆದರೆ ಅದು ದಂಭಾಚಾರವಾದೀತು; ನಾನು ಒಣಗಿ ಹೋಗಿ ಬರೀ ಎಲುಬಿನ ಹಂದರವಾದೇನು. ಹಾಗೆ ಆಗಲಾರದು. ನನ್ನ ಸಿಟ್ಟನ್ನು ತಿಳಿದು, ನಿಗ್ರಹ ಮಾಡಿ ಅದರಲ್ಲಿಯೆ ಮುಂದಿನ ಹಾದಿ ಹುಡುಕುತಿರುತ್ತೇನೆ. ಯಾರಿದುರಿಗೆ ಎಚ್ಚರದಿಂದ ನಡದುಕೊಳ್ಳಬೇಕೋ ಅಂಥವರಲ್ಲದೆ ನನ್ನವರೇ ಸುತ್ತ ಇದ್ದಾಗ ನನ್ನ ಸಿಟ್ಟು ಹೊರಬೀಳುತ್ತದೆ. ಅವರು ನನ್ನ ಮೇಲೆ ದಯೆ ತೋರಿ ಅದನ್ನೂ ಮರೆಯುತ್ತಾರೆ.

......ರ ಬಗ್ಗೆ ನೀನು ತಿಳಿದಂತೆ ಇರುವ ಸಂಭವ ಕಡಮೆ. ಪರದೂಷಣೆಯನ್ನು ನಂಬುವ ಮೊದಲು ಬಹಳ ವಿಚಾರ ಮಾಡಬೇಕು. ಅದನ್ನು ಕೇಳದಿರುವುದೇ ಒಳಿತು.

......ರ ಬಗ್ಗೆ ಏನಾದೀತು? ಅವರ ಅಭಿಪ್ರಾಯ ಬೇರೆ, ಮತ ಬೇರೆ. ಮನೋರಥ ಬೇರೆ. ಅವರಿಗೆ ಇಷ್ಟವಾದ ಪ್ರವೃತ್ತಿಯನ್ನು ಸರಕಾರ ನಡೆಯಗೊಡರು. ಅವರು ನಡೆಯಗೊಟ್ಟದ್ದು ಇವರಿಗೆ ರುಚಿಯಿಲ್ಲ. ಎಲ್ಲೆಂದರೆ ಅಲ್ಲಿ ಹೊಂದಿಕೊಳ್ಳ ಬಲ್ಲವರೆ ಪ್ರಜಾತಂತ್ರದಲ್ಲಿ ಉಪಯೋಗಕರ. ಅವರಂಥವರು ಯಾವುದಾದರೂ ಉದ್ಯೋಗ ಹಿಡಿದು ಶಕ್ಯವಾದಷ್ಟು ಸೇವೆ ಮಾಡುವುದೇ ಯೋಗ್ಯ. ಅನೇಕರಿಗೆ ನಾನು ಹೀಗೂ ದಾರಿ ತೋರಿಸಿದೇನೆ. ಪ್ರಾಮಾಣಿಕತನದಿಂದ ಉದ್ಯೋಗ ಮಾಡುವುದು ಕೂಡ ದೇಶಸೇವೆಯೇ. ಸೇವೆ ಮಾಡುತ್ತೇವೆಂದು ಹೇಳುವವರೆಷ್ಟೋ ಜನ ಭೂಮಿಗೆ ಭಾರವಾಗಿರುವ ಸಂಭವ ಇದೆ. ಅದೇ, ಉದ್ಯೋಗ ಮಾಡುವವರು ಶುದ್ಧ ಸೇವಕರಾಗಿರಬಹುದು.

ಉದ್ಯೋಗದ ವಿಷಯವಾಗಿ ಸಾಧ್ಯವಾದರೆ ಏನಾದರೂ ಮಾಡು. ಒಂದೇ ಕಡೆ ತಳವೂರಿ ನಿಲ್ಲಬಹುದು; ಕೆಲಸವೂ ಆದೀತು. ನೀನಿರುವ ಹಳ್ಳಿ ಪಟ್ಟಣದ ಹೊರಪೇಟೆ ಆಗಿದ್ದರೆ ಏನೂ ಲಾಭವಿಲ್ಲ. ಆದರೆ ಈಗ ಅಲ್ಲೇ ನೆಲೆಯಾಗಿದ್ದೀ ಎಂದ ಮೇಲೆ ಅದನ್ನು ಏಕಾಏಕಿ ಬಿಡುವುದೂ ಸರಿಯಲ್ಲ. ಈ ಬಗ್ಗೆ ನನ್ನ ಉಪದೇಶ ಕೆಲಸಕ್ಕೆ ಬಾರದ್ದು. ಆ ಸ್ಥಳ ಆರಿಸಿದ್ದರಲ್ಲಿ ಏನಾದರೂ ತಪ್ಪಾಗಿದ್ದರೆ ಅದನ್ನೇ ಸಾಧಿಸಬೇಕಾದ ಅಗತ್ಯವಿಲ್ಲ. ತಪ್ಪಾಗಿದ್ದರೆ ತಿದ್ದಿಕೊಳ್ಳಲೇಬೇಕು.

ಅಹಿಂಸೆಯಿಂದ ಸ್ವರಾಜ್ಯ ಗಳಿಸಿಕೊಡಲು ನಾನು ಯಾರು? ನನ್ನಲ್ಲಿ ಅಹಿಂಸೆ ನಿಜವಾಗಿಯೂ ಬೇರೂರಿದ್ದರೆ ಅದರ ಸಂಸ್ಕಾರ ಪರರಿಗೂ ಆಗದೆ ಬಿಡದು. ನನ್ನಲ್ಲಿಯೆ ನನಗೆ ಶ್ರದ್ಧೆ ಕಡಮೆ. ಆದರೆ ಅಹಿಂಸೆಯಲ್ಲಿ ಮಾತ್ರ ಪೂರ್ಣ ಶ್ರದ್ಧೆ. ಇದೊಂದು ದೊಡ್ಡ ಸಿದ್ಧಾಂತವೆಂದು ಜಗತ್ತಿಗೆ ಹೇಳುತ್ತಿದೇನೆ. ಇದು ಆಚರಣೆಗೆ ಬಂದದ್ದು ಬಹಳ ಸ್ವಲ್ಪ. ದಿನದಿನವೂ ನನಗದರಲ್ಲಿ ಹೊಸರುಚಿ ಸಿಗುತ್ತಿದೆ. ನನಗೆ ಅದೊಂದು ಕಲ್ಪತರು. ಅದರ ಹೊರತು, ಈ ಪ್ರಪಂಚದಲ್ಲಿ ನನಗೆ ಬೇರೇನೂ ಇಲ್ಲ. ಸತ್ಯನಾರಾಯಣನನ್ನು ಕಾಣಲು ಬೇರೆ ಯಾವ ಮಾರ್ಗವೂ ನನಗಿನ್ನೂ ದೊರೆತಿಲ್ಲ. ಅವನನ್ನು ಕಾಣದ ಜೀವನ–ನನ್ನ ದೃಷ್ಟಿಗೆ–ವ್ಯರ್ಥ. ಅಂತೇ ಅಹಿಂಸೆಯ ಮಾರ್ಗ ಸುಲಭವಿರಲಿ ಕಷ್ಟವಿರಲಿ, ನಾನು ಆ ಹಾದಿಯಲ್ಲಿಯೆ ಹೋಗಬೇಕು. ನಾನು ಸತ್ತ ಮೇಲೆ ರಕ್ತಪಾತವಾದರೆ ನನ್ನ ಅಹಿಂಸೆ ಅಪೂರ್ಣ, ಅಸತ್ಯ ಎಂದು ತಿಳಿಯಬೇಕು. ಆದರೆ ಅಹಿಂಸಾತತ್ವ ಸುಳ್ಳಲ್ಲ. ಅಥವಾ ಹೀಗೂ ಇರಬಹುದು. ಅಹಿಂಸೆಯನ್ನು ಮುಟ್ಟುವ ಮೊದಲು ರಕ್ತದ ವೈತರಣೆಯನ್ನೇ ದಾಟಬೇಕಾಗಿ ಬಂದರೂ ಬಂದೀತು. ಅಹಿಂಸೆ ರಾಜಕೀಯದಲ್ಲಿ ಮೊದಲು ಕಾಲಿಟ್ಟದ್ದು ೧೯೨೦ರಲ್ಲಿ. ತರುವಾಯ ಚೌರಿಚೌರಾ ಮುಂತಾದವು ಆಗಲಿಲ್ಲೇನು? ಸರಕಾರ ತಾನೆ ಎಲ್ಲಿ ಕೈ ಬಿಗಿಹಿಡಿದಿದೆ? ಇಷ್ಟೆಲ್ಲ ಹಿಂಸೆ ನಡೆದಿದ್ದರೂ ಅಹಿಂಸೆ ತನ್ನ ಪ್ರಭಾವವನ್ನು ಬೀರಿದೆ ಎಂದೇ ಹೇಳುತ್ತೇನೆ. ಆದರೆ ಕಡಲಿನಲ್ಲಿ ಹಸಿಯಿದ್ದಂತೆ ಆ ಪ್ರಭಾವ. ನನ್ನ ಪ್ರಯೋಗವೇನೋ ಸಾಗುತ್ತಲೇ

ಇದೆ. ನಿನ್ನ ಶ್ರದ್ಧೆ ಅಚಲವಾಗಿರಲಿ. ಇಂದ್ರಿಯ ಗೋಚರವಾದುದೆಲ್ಲ ಸತ್ಯವಲ್ಲ. ಎಷ್ಟೋ ಸಲ ಅವು ಅಸತ್ಯವನ್ನೇ ಕಾಣುತ್ತವೆ. ಅದಕ್ಕಾಗಿಯೆ ಅನಾಸಕ್ತಿ ಯೋಗದ ಹಾದಿ ಹುಡುಕ ಬೇಕಾಯಿತು. ಅನಾಸಕ್ತಿಯೆಂದರೆ ಇಂದ್ರಿಯಗಳನ್ನು ದಾಟುವುದು. ಆದರಲ್ಲಿ ಆಸಕ್ತಿ ಅಳಿದರೆ ಮಾತ್ರ ಇದು ಸಾಧ್ಯ. ಕಣ್ಣಿಗೆ ಕಂಡದ್ದೇ ನಿಜವೆಂದರೆ ಭೂಮಿ ಚಪ್ಪಟೆಯೆನ್ನಬೇಕಲ್ಲವೆ? ಸೂರ್ಯ ಚಿನ್ನದ ತಟ್ಟೆಯಂತೆ ಕಂಡಾನಲ್ಲವೆ? ನನ್ನ ಕಣ್ಣಿಗೆ ಕಂಡಹಾಗೆಯೆ ನೀನಿದ್ದರೆ ನನ್ನ ಅವತಾರ ಸಮಾಪ್ತಿಯಾದಂತೆಯೆ ತಾನೆ. ನನ್ನ ವಿಷಯವಾಗಿ ನೀನು ಕೇಳಿದ್ದೆಲ್ಲ ನಿಜವೆಂದು ತಿಳಿದುಕೊಂಡರೆ ನಿನ್ನ ಗತಿಯೇನು?

ಬಹಳ ಬರೆದೆ. ಮೀರಾಬೇನಳ ಅಲಾರಂ ಕೂಡ ಬಾರಿಸಿತು. ಇನ್ನು ಪ್ರಾರ್ಥನೆಯ ಗಂಟೆಯೂ ಆದೀತು. ನಾನು ಬರೆದಿರುವುದರಿಂದ ನಿನಗೇನು ಚಿತ್ರ ತೆಗೆಯಲು ಬಂದೀತೋ ಅದನ್ನು ತೆಗೆ. ೧೫ನೆ ತೇದಿಯ ತರುವಾಯ ದೆಹಲಿಗೆ ಹೋಗುವ ಯೋಚನೆಯಿದೆ. ಅಲ್ಲಿನ ಹರಿಜನಾಶ್ರಮದಲ್ಲಿ ಕೆಲವು ದಿನ ಇರಬೇಕೆಂದು ಮಾಡಿದೇನೆ. ಕೊನೆಗಂತೂ ಜೇಲು ಕಣ್ಣ ಮುಂದೆ ಇದ್ದೇ ಇದೆ.

೮-೧೨-೩೮

ಬಾಪೂನಆಶೀರ್ವಾದ.

೭೮

ಬೆಳಗ್ಗೆ ೧-೪೫ಕ್ಕೆ ಬರೆಯುದ್ದೇನೆ. ಇತ್ತೀಚೆಗೆ ಸುಮಾರು ೨ಗಂಟೆಗೆ ಏಳುವ ರೂಢಿಯಾಗಿದೆ. ೯ ಗಂಟೆಗೆ ಮೊದಲೇ ಮಲಗುತ್ತೇನೆ. ಹಗಲು ಆಗಿಷ್ಟು ಈಗಿಷ್ಟು, ಅರ್ಧ ಗಂಟೆಯಿಂದ ಒಂದು ಗಂಟೆಯವರೆಗೆ ನಿದ್ದೆ ಆಗುತ್ತದೆ. ಇಷ್ಟು ನನಗೆ ಸಾಕು.

ಸ್ವಪ್ನದಲ್ಲಿ ವ್ರತಭಂಗವಾದರೆ ಎಚ್ಚರವಾದ ಕೂಡಲೆ ರಾಮನಾಮ ಜಪವೇ ಅದರ ಪ್ರಾಯಶ್ಚಿತ್ತ. ಸ್ವಪ್ನದಲ್ಲಿ ಆಗುವ ದೋಷ ನಮ್ಮ ಅಪೂರ್ಣತೆಯ ಕುರುಹು. ತಿಳಿಯುವೆಯೆ ಆದರೂ ಆ ವಿಷಯ ನಮ್ಮ ಅಂತಃಕರಣದ ಮೂಲೆಯಲ್ಲಿ ಎಲ್ಲಿಯೋ ಭೋಗವಾಗುತಿರುತ್ತದೆ.

ಇದರಿಂದ ನಿರಾಶೆಗೊಳ್ಳುವ ಕಾರಣವಿಲ್ಲ. ನಾವು ಹೆಚ್ಚು ಪ್ರಯತ್ನ ಶೀಲರಾಗಬೇಕು. ನಿರಾಶೆ ವಿಷಯಾಸಕ್ತಿಯ ಒಂದು ಲಕ್ಷಣ; ಅಶ್ರದ್ಧೆ ಗಂತೂ ಸರಿಯೇ ಸರಿ. ರಾಮನಾಮ ನುಡಿಯಲು ಆಯಾಸವಾದರೆ ಅವನಿಗೆ ನಿರಾಶೆಯೇ. ಕೋಲಂಬಸನ ಜೊತೆಗಾರರಿಗೆ ಅವನ ಮೇಲೆ ಶ್ರದ್ಧೆ ಹೋದಾಗ ಅವನನ್ನು ಕೊಲ್ಲಲು ಎದ್ದು ನಿಂತರು. ಶ್ರದ್ಧೆಯೇ ಕಣ್ಣಾದ ಕೋಲಂಬಸನಿಗೆ ಭೂಮಿ ಕಾಣುತ್ತಿತ್ತು. ಅವನು ಅವಧಿ ಕೇಳಿಕೊಂಡ; ಅಮೆರಿಕಾವನ್ನು ಮುಟ್ಟಿದ!!! ತಿನ್ನಬಾರದ ಪದಾರ್ಥ ವನ್ನು ಕನಸಿನಲ್ಲಿ ತಿಂದರೆ ಅದರ ಅರ್ಥ ಇದೇ. ಇಂಥ ಸ್ವಪ್ನಕ್ಕೆ ಬಾಹ್ಯ ಕಾರಣವೂ ಇದೆ. ತಿಳಿದರೆ ಅವನ್ನು ನಿವಾರಣೆ ಮಾಡಬೇಕು. 'ಸರ್ವಾವಸ್ಥೆಗಳಿಗೂ ಸಾಕ್ಷಿಯಾದ ನಿಷ್ಕಲಬ್ರಹ್ಮ ನಾನೇ! * ಹೀಗೆ ನಾವು ಹಾಡುತೇವೆ, ನಾವೂ ಹಾಗೆ ಆಗುವ ಪ್ರಯತ್ನ ಮಾಡುತಿದ್ದರೆ ಹಾಗೆ ಹಾಡುವುದು ಸರಿ. ನಾವಿನ್ನೂ ಹಾಗೆ ಆಗಿಲ್ಲವೆಂಬುದರ ಗುರುತೇ ಈ ಸ್ವಪ್ನ. ನಮಗೆ ಅವು ದೀಪಸ್ತಂಭವಿದ್ದಂತೆ. ದೇವರ ಕೃಪೆಯಿಲ್ಲದೆ ಎಲೆ ಕೂಡ ಅಲ್ಲಾಡದು. ಅದಕ್ಕೆ ಪ್ರಯತ್ನದ ನಿಮಿತ್ತ್ಯವೂ ಬೇಕು, ಸರ್ವ ಪ್ರಾಣಿಗಳ ಶುದ್ಧ ತಮ ಸೇವೆಯೇ ಸಾಕ್ಷಾತ್ಕಾರ.

೨೬-೧೨-೩೪

ಬಾಪೂನ ಆಶೀರ್ವಾದ.

**೭೫**

ಈಗ ಆರುಗಂಟೆ ಆಗುತ್ತಿದೆ. ಇನ್ನೂ ಕತ್ತಲೆ ಬಹಳ ಇದೆ. ಚಳಿಗೆ ಕೈ ಬೆರಳು ಸೇದಿಹೋಗಿವೆ. ಸುತ್ತಲೂ ಕೊಂಚ ಅಡಿವಿಯೂ ಇದೆ. ಇಲ್ಲಿ ಹರಿಜನಾಶ್ರಮ ಕಟ್ಟಬೇಕು. ಎರಡು ಗುಡಿಸಲು ಕಟ್ಟಿದೆ. ಮೂರು ನಾಲ್ಕು ಗುಡಾರ ಹಾಕಿದಾರೆ.

ರಾಮನಾಮವೆಂದರೆ ರಾಮಬಾಣ; ಈ ಅಚಲಶ್ರದ್ಧೆ ನಿನ್ನಲ್ಲಿದೆ.

---

* ಯತ್ಸ್ವಪ್ನ ಜಾಗರಸುಷುಪ್ತಿಮುವೈತಿ ನಿತ್ಯಂ
ತದ್ಬ್ರಹ್ಮ ನಿಷ್ಕಲಮಹಂ ನ ಚ ಭೂತಸಂಘಃ
ಆಶ್ರಮ ಭಜನಾವಲಿ; ಪ್ರಾತಃಪ್ರಾರ್ಥನೆ.

ಅಂತೇ, ಈ ಸತ್ಯ ನಿನಗೆ ಅನುಭವವಾದೀತು. ಎಲ್ಲ ಕಡೆಯಲ್ಲಿಯ ಕತ್ತಲಿದ್ದರೂ ನೀನು ರಾಮನಾಮವನ್ನು ಜಪಿಸುತ್ತಲೇ ಹೋಗ ನಿನಗೆ ಕ್ಷೇಮವಾದೀತು.

ಒಕ್ಕಲಿಗರ ಹಿಡುವಳಿಗಳ ವಿಭಜನದ ಸಮಸ್ಯೆ ಬಹಳ ಗಡ ಸಾದುದು. ನಮ್ಮ ಕೈಗೆ ಅಧಿಕಾರ ಬಂದರೂ ಅದನ್ನು ಬಿಡಿಸುವುದ ಬಹಳ ಕಷ್ಟ. ಅಧಿಕಾರವಿಲ್ಲದೆಯೆ ಏನೇನು ಸಾಧ್ಯ ಎನ್ನುವುದೇ ನಮ್ಮ ಈಗಿನ ಪ್ರಯೋಗ. ಸಣ್ಣಸಣ್ಣ ಪಟ್ಟಿಯಂಥ ಹೊಲಗಳನ್ನು ಕೂಡ ಬುದ್ಧಿವಂತತನದಿಂದ ಸಾಗುವಳಿ ಮಾಡಿದರೆ ಅದರ ಉಪಯೋಗ ವಾದೀತು. ಇದನ್ನೆಲ್ಲ ಪ್ರಯೋಗ ಮಾಡಿ ತೋರಿಸಬೇಕಾದೀತು. ನಮಗೆ ಅದರಲ್ಲಿ ಜ್ಞಾನಕಡಮೆ. ಈ ವಿಷಯದಲ್ಲಿ ನಾವು ಕುಂಟರು. ಅಂತೆಯೆ ವ್ಯವಸಾಯದ ಸಮಸ್ಯೆಗೆ ನಾವಿಂದು ಕೈಹಾಕಿಲ್ಲ. ನಮಗೆ ಸುಲಭವಾಗಿ ತಿಳಿಯುವಂಥ, ಮಾಡಲು ಬರುವಂಥ ಉದ್ಯೋಗಗಳನ್ನೆ ಇಂದು ಮಾಡಿ ತೋರಿಸಬೇಕಾಗಿದೆ. ಏನಾದರೂ ಮಾಡಿ ಒಕ್ಕಲಿಗನ ಸೋಮಾರಿತನ ಕಳೆದು, ಉದ್ಯೋಗದ ಜೊತೆಗೆ ಅವನ ಬುದ್ಧಿಯನ್ನೂ ಮೇಳಗೂಡಿಸಿದರೆ ಉಳಿದುದೆಲ್ಲ ಹೇಗಾದರೂ ನಡೆದೀತು. ಪೂರ್ವಕಾಲ ದಲ್ಲಿ ಜನ ಚಲೋ ಸ್ಥಿತಿಯಲ್ಲಿದ್ದರು ಎಂಬದನ್ನು ಸಿದ್ಧಮಾಡಬಹು ದಾಗಿದೆ. ಮೊದಲು ದುಡ್ಡು ಹೊರಗಿನಿಂದ ಬರುತಿತ್ತು. ಭೂಮಿ ಇಷ್ಟು ತುಂಡುತುಂಡಾಗಿರಲಿಲ್ಲ. ಇಂದಿನ ಹಾಗೆ ಆಗ ಹಣ ಹೊರಗೆ ಹೋಗು ತ್ತಿರಲಿಲ್ಲ. ನಿಸರ್ಗವೂ ತನ್ನ ಕೆಲಸವನ್ನು ಸರಾಗವಾಗಿ ಮಾಡುತ್ತಿತ್ತು. ಪೂರ್ಣಜ್ಞಾನವಿಲ್ಲದಿದ್ದರೂ ನಾವಿಂದು ನಿಸರ್ಗದ ಕಾರ್ಯದಲ್ಲಿ ಅಡ್ಡಗಾಲು ಹಾಕುತ್ತಿದೇವೆ. ಇದರಲ್ಲಿಯೂ ಒಂದೇ ತಂತಿಯ ಏಕನಾದ ನಮ್ಮದು. ಅದರ ಪರಿಣಾಮವಾಗಿ ನಾವು ಬರೀ ಹಿಂಡಿ ಹಿಪ್ಪೆ. ರಾಮರಾಜ್ಯವೇನೊ ನಿಜವಾಗಿ ಕಾಲ್ಪನಿಕವೆ; ಆದರೂ ಅದರಂತೆ ಏನೋ ಸ್ವಲ್ಪವಾದರೂ ಮೊದಲಿಗೆ ಇತ್ತು. ಇದನ್ನು ಪ್ರಮಾಣಿಸಬಹುದು. ಅಸತ್ಯ, ದಾರಿದ್ರ್ಯ ಎಂದೂ ಪೂರಾ ಲೋಪವಾಗಿರಲಿಲ್ಲ. ಮುಂದೆಯೂ ಪೂರ್ಣವಾಗಿ ಲೋಪವಾಗಲಿಕ್ಕಿಲ್ಲ.

ಗುಡ್ಡಗಾಡಿನ ಗವಿಗಳನ್ನು ಸೇರುವ ಹಾದಿಯಲ್ಲಿ ಬೇಸರ ತುಂಬಿದೆ. ಅದರಿಂದಲೂ ಕೊಂಚ ಉಪಯೋಗವಿದ್ದೀತೋ ಏನೋ. ಈಗಂತೂ ಅದು ಪೂರಾ ಕೆಲಸಕ್ಕೆ ಬಾರದುದು. ಸೇವೆ ಮಾಡುಮಾಡುತ್ತ ಸಾಯುವುದೂ ಅಡವಿಯಲ್ಲಿದ್ದ ಹಾಗೆಯೆ.

ನಮಗೆ ಅನ್ವಯಿಸಿದ ಮಾತೇ ಪರರಿಗೂ. ನಮ್ಮ ವಿಷಯದಲ್ಲಿ ಅನಾಸಕ್ತಿಯಿದ್ದರೂ ಕೂಡ ಶೀತೋಷ್ಣಗಳ ಪರಿವೆಯಿದ್ದೇ ಇರುತ್ತದೆ. ಚಳಿಯಲ್ಲಿ ಬಿಸಿಲು, ಬಿಸಿಲಲ್ಲಿ ನೆರಳು ನಾವು ಹುಡುಕುತ್ತಲೇ ಇದೇವೆ. ಇದರಲ್ಲಿ ವಿಫಲರಾದರೆ ಅಳುತ್ತ ಕೂಡದೆ ಇರುವುದು ಅನಾಸಕ್ತಿ. ಚಳಿಯಲ್ಲಿ ನಡುಗುತ್ತಿರುವವರ ಮಾತೂ ಹೀಗೇ. ಅವರಿಗೆ ನೆರವಾಗಲು ಪ್ರಯತ್ನ ಮಾಡೋಣ. ಅವರು ನಡುಗುತಿರುವಾಗ ನೋಡಿ ನಮ್ಮಲ್ಲಿದ್ದದ್ದನ್ನು ಅವರಿಗೆ ಕೊಡಬಹುದು. ಕೊಟ್ಟರೂ ಅವರ ನಡುಕ ನಿಲ್ಲದಿದ್ದರೆ ಅದನ್ನು ಸೈರಿಸಬೇಕು. ಅದರಿಂದ ನಾವು ಆತುರಗೊಂಡು ಹೊಡೆದಾಡಬೇಕಾಗಿಲ್ಲ; ಅಸತ್ಯವನ್ನಾಚರಿಸಬಾರದು. ಇದೇ ಅನಾಸಕ್ತಿ. ಖಾದಿ ಹೊಟ್ಟೆಯ ಕಸಬು ಹೌದೆಂದರೆ ಹೌದು; ಅಲ್ಲವೆಂದರೆ ಅಲ್ಲ. ಇದಕ್ಕೇ ಅದನ್ನು ಅನ್ನಪೂರ್ಣ ಎಂದದ್ದು.

ಹಿಂಸೆಯೊಂದು ಬಿಟ್ಟರೆ ರಷ್ಯಾದಿಂದ ನಾವು ಎಷ್ಟೋ ಮಾತು ಕಲಿಯಬಹುದಾಗಿದೆ. ಆದರೆ ಈಗ ಬಲಾತ್ಕಾರವಾಗಿ ಯಾವುದು ನಡೆದಂತೆ ಕಾಣುತ್ತದೆಯೋ ಅದನ್ನು ಅವರ ಸ್ವೇಚ್ಛೆಗೆ ಬಿಟ್ಟರೆ ಅವರು ಒಪ್ಪಲಿಕ್ಕೂ ಇಲ್ಲ. ಇದೂ ಸಂಭವವೆ. ಈ ಅನುಮಾನಗಳೆಲ್ಲ ನಾವು ಓದಿದ್ದರ ಮೇಲೆ ಕಟ್ಟಿದ್ದು. ಇವು ಸರಿಯಲ್ಲ. ಸ್ವತಂತ್ರವಾಗಿ ವಿಚಾರಮಾಡುವುದೇ ಯೋಗ್ಯ.

ವಿಷಮತೆಯ ಸಂಪೂರ್ಣ ನಾಶ ಅಶಕ್ಯ. ನಾನು ತೋರಿಸಿದ ಹಾದಿ ಆದಷ್ಟು ಹೆಚ್ಚು ಸಮತೆಯ ಬಳಿಗೊಯ್ಯುವ ಹಾದಿ. ಅದೇನು ಹೊಸಹಾದಿಯಲ್ಲ; ರೀತಿ ಹೊಸದು, ಅಷ್ಟೆ.

ವಿರಾಮವಿದ್ದಾಗ ಮಾಡಿ ತನ್ನ ಗಳಿಕೆ ಹೆಚ್ಚಿಸಲು ಉಪವೃತ್ತಿ ಒಂದು ಮಾರ್ಗ ಎಂಬುದು ಒಕ್ಕಲಿಗರೊಂದು ಆಶ್ವಾಸನ.

ಒಕ್ಕಲಿಗರ ಆರ್ಥಿಕಸ್ವಾರ್ಥದ ಸಂಘಟನೆ ಸಾಧ್ಯ. ಸಂಘಶಕ್ತಿ ನಮಗೆ ಮೈಗೂಡದ ಹೊರತು ನಮಗೆ ಆರ್ಥಿಕ ಲಾಭವಾಗುವ ಸಂಭವ ವಿಲ್ಲ.

ಕರ್ಮದ ನಿಯಮವನ್ನು ತಿಳಿದುಕೊಳ್ಳುವುದು ಸುಲಭ. Mechanics ಯಂತ್ರಶಾಸ್ತ್ರದಲ್ಲಿ ಏನು ಕಲಿಯುತ್ತೇವೋ ಅದೇ ಇಲ್ಲಿದೆ. ಒಂದೇ ಕೇಂದ್ರದಲ್ಲಿ ಕೆಲಸ ಮಾಡುವ ಎಲ್ಲ ದೃಶ್ಯಶಕ್ತಿಗಳೂ ಒಂದೇ ದೃಶ್ಯಶಕ್ತಿ ಯಾಗಿ ನಮಗೆ ಕಾಣುತ್ತವೆ. ಕರ್ಮದ ಮಾತೂ ಅದೇ.

ಇನ್ನೂ ಸಣ್ಣ ಹಳ್ಳಿಯಲ್ಲಿ ನೆಲೆಸುವ ಇಷ್ಟವಿದ್ದರೆ ಸಂತೋಷವಾಗಿ ಹೋಗು. ಇದ್ದಲ್ಲಿಯೇ ಸ್ಥಿರವಾಗಿ ನಿಂತರೂ ಸಂತೋಷವೇ. ಒಂದು ಕಡೆ ಪೂರ್ಣ ಸಫಲವಾದರೆ ಅದು ನಮಗೊಂದು ಪ್ರಮಾಣವಾದ ಮೂಲೆಮಟ್ಟವಾಗುತ್ತದೆ. ನಮ್ಮಲ್ಲಿ ಅಂಥ ಮೂಲೆಮಟ್ಟ ಈಗ ಇಲ್ಲ.

ಬಿರ್ಲಾ ಮಿಲ್ಸ್ ದೆಹಲಿ, ೩೧-೧೨-೩೪

ಬಾಪೂನ ಆಶೀರ್ವಾದ

೭೬

ನಿನ್ನ ಕಾಗದಕ್ಕೆ ಉತ್ತರ ಬರೆಯಲು ಬಹಳ ತಡವಾಯಿತು. ತುಂಬಾ ಕೆಲಸ. ಬರೆದು ಬರೆದು ಬಲಗೈ ಸೋತಿದೆ. ಎಡಗೈಯಿಂದ ಬರೆಯುತ್ತಿದೇನೆ.

ನನ್ನ ಶರೀರ ಸೊರಗಿರಬಹುದು. ನನಗೇನೂ ಹಾಗೆ ಅನಿಸದು. ಉಪವಾಸದಿಂದ ನಿಶ್ಶಕ್ತಿಯಾಗಿಲ್ಲ. ಪಾರಣೆ ಸರಿಯಾಗಿ ಮಾಡಲು ಗೊತ್ತಿದ್ದರೆ ನಿಶ್ಶಕ್ತಿಯೆನಿಸಬಾರದು. ನನ್ನ ಮೈಯ ಮೇಲೆ ನನ್ನ ಆಹಾರದ ಪರಿಣಾಮ ಚನ್ನಾಗಿ ಆಗಿದೆ. ಅದರ ನಿದಾನ ನನಗೆ ಗೊತ್ತಿಲ್ಲ. ನಿನ್ನ ತಂದೆ ತಾಯಿ ನಿನ್ನನ್ನು ನೋಡಿಹೋದುದು ಚಲೋ.

ಗುಳ್ಳೆ ಎದ್ದರೆ ಮದ್ದಿದೆ; ಕೆಲವು ದಿನ ಹಣ್ಣು, ಸೊಪ್ಪು ಮಾತ್ರವೇ ತಿನ್ನಬೇಕು. ತುಷಾರಸ್ನಾನದಿಂದ ಅವು ಮಾಯುತ್ತವೆ. ಮೊದಲು ತುಷಾರ, ಆ ಮೇಲೆ ತಣ್ಣೀರು ಸ್ನಾನ. ೩-೪ ದಿನದ ಮೇಲೆ ಕರುಳು ಸ್ವಚ್ಛವಾಗುತ್ತವೆ. ಆಮೇಲೆ ಹಾಲು, ಸಿಹಿಮೊಸರು, ಹಣ್ಣು, ಸೊಪ್ಪಿನ

ಪಲ್ಯ ತೆಗೆದುಕೊಳ್ಳಬೇಕು. ಅದರಲ್ಲಿ ಮೆಂತೆಪಲ್ಯ, ಪಲಕಿನಸೊಪ್ಪು, ರಾಜಗಿರಿ, ಸಲಾಡ್ ಪಲ್ಯ ಉತ್ತಮ.

ದೇವರಲ್ಲಿ ಪ್ರಾರ್ಥನೆ ಎಂದರೆ ತೀವ್ರವಾಗಿ ಬಯಸುವುದು. ದೇವರು ನಮ್ಮಿಂದ ಭಿನ್ನನೂ ಹೌದು, ಅಭಿನ್ನನೂ ಹೌದು. ಪರಿಪೂರ್ಣನಾದುದರಿಂದ ಭಿನ್ನ; ನಾವು ಅವನ ಅಂಶವಾದ್ದರಿಂದ ಅಭಿನ್ನ. ಕಡಲಿನಿಂದ ಸಿಡಿದಹನಿ ಕಡಲನ್ನಲ್ಲದೆ ಯಾರ ಮೊರೆ ಹೋಗಬೇಕು? ಕಡಲಿಗೆ ಕರ್ತವ್ಯ-ಅಕರ್ತವ್ಯ ಏನುಂಟು? ಪ್ರಾರ್ಥನೆ ವಿಯೋಗಿಯ ವಿಲಾಪ. ಪ್ರಾರ್ಥನೆಯಿಲ್ಲದೆ ದೇಹಧಾರಿ ಬಾಳಲಾರ.

ರಾಷ್ಟ್ರದ ಪ್ರಗತಿಯ ತಿರುವು ನಮ್ಮ ಕೈಯಲ್ಲೇ ಇದೆ; ಇಲ್ಲವೆಂದರೆ ಇಲ್ಲೇ ಇಲ್ಲ. ನಾವು ಶೂನ್ಯದಂತಾದರೆ ಪ್ರಗತಿ. ಅದು ನಮ್ಮ ಕೈಯಲ್ಲಿಯೇ ತಾನೆ. ಆದರೆ ಪ್ರಗತಿ ನಮ್ಮ ಕೈಯಲಿಲ್ಲ. ಏಕಸ್ವರೂಪಿಯಾದ ಏಕೋ ದೇವನ ಕೈಯಲ್ಲಿದೆ. 'ಉಧೋ ಕರ್ಮನ್‌ಕಿ ಗತ್ ನ್ಯಾರಿ' ಕರ್ಮಕ್ಕೆ ಒಂದು ನಿಯಮವಿದೆಯೆಂದು ನಮಗೆ ಗೊತ್ತಿದೆ. ಆ ಶಾಸನ ಹೇಗೆ ನಡೆಯುತ್ತದೆಯೋ ನಮಗೆ ಗೊತ್ತಿಲ್ಲ. ಇದೂ ಪ್ರಭು ಕೃಪೆಯೇ, ಈ ಅಜ್ಞಾನ. ಸಾಮಾನ್ಯನಾದ ರಾಜಶಾಸನವೇ ನಮಗೆ ಸರಿಯಾಗಿ ತಿಳಿಯದು; ಶಾಸನ ಮೂರ್ತಿಯಾದ ಪರಮಾತ್ಮನ ನಿಯಮ ಹೇಗೆ ತಿಳಿಯಬೇಕು.

ಈಗ ನಡೆದಿರುವ ಕದನದಲ್ಲಿ ಮೊದಲು ನಮ್ಮ ಕಣ್ಣಿಗೆ ಗೆಲವು ಕಂಡಿತ್ತು. ಅದು ಬರಿಯ ಕಲ್ಪನೆ. ಪರಾಭವವೂ ಕೂಡ ಕಲ್ಪನೆಯೇ. ಸತ್ಯಕ್ಕೆ ನಿತ್ಯಜಯ ಎಂದು ಅಚಲವಾಗಿ ನಂಬಿದವನ ನಿಘಂಟಿನಲ್ಲಿ ಸೋಲೆಂಬ ಮಾತೇ ಇಲ್ಲ.

೩-೨-೩೫

ಬಾಪೂನ ಆಶೀರ್ವಾದ.

## ೭೭

ಇಂದು ನಿನ್ನ ಎರಡೂ ಪತ್ರಕ್ಕೆ ಉತ್ತರ ಬರೆಯುತ್ತಿದೇನೆ. ನೇಗಿಲು ಉಳುವುದು, ಕಪಲೆ ಹೊಡೆಯುವುದು ಪ್ರಾರಂಭ ಮಾಡಿದೆಯೇನು?

ಯಾರ ನಡುವೆ ನೀನು ನೆಲೆಸಿದ್ದೀಯೋ ಅವರೊಳಗೆ ಹುಟ್ಟು ಸಾವಿನ ಪ್ರಸಂಗದಲ್ಲಿ ಆಗುವ ವೆಚ್ಚ ಇಳಿಸಬೇಕು. ಎಲ್ಲರೂ ಒಪ್ಪಲಿಕ್ಕಿಲ್ಲ. ಕೆಲವರಾದರೂ ನಿನ್ನ ಮಾತು ಕೇಳಿಯಾರು.

....ರೊಡನೆ ನೀನು ಮಾಡಿದ ಸಂವಾದ ಚೆನ್ನಾಗಿದೆ. ಅನೇಕರು ಅಹಿಂಸೆಯನ್ನು ತಾತ್ಕಾಲಿಕ ನೀತಿಯೆಂದೇ ಅನುಸರಿಸುತ್ತಾರೆ. ಅಹಿಂಸೆಯೇ ಪರಧರ್ಮವೆಂದು ತಿಳಿದು ಪಾಲಿಸುವ ನಿನ್ನಂಥ ಜನರೂ ಇದ್ದಾರೆ. ಕೊನೆಗೆ ಅಹಿಂಸೆಯೇ ನಮಗೆ ನೆರವಾದೀತು. ಸ್ವತಂತ್ರರಾದರೂ ನಮಗೆ ಸೇನೆ ಇದ್ದೇ ಇದ್ದೀತು. ಸೇನೆಯ ಅವಶ್ಯಕತೆಯಿಲ್ಲವೆಂಬುದನ್ನು ಜನರು ಒಪ್ಪುವಂತೆ ಮಾಡುವ ಸಾಮರ್ಥ್ಯ ನನಗಿಲ್ಲ; ನನ್ನಲ್ಲಿ ಅಷ್ಟು ಅಹಿಂಸೆಯಿಲ್ಲ. ಸೇನೆಯಿದ್ದ ಮೇಲೆ ಸೇನಾ ಶಿಕ್ಷಣ ಇರಲೇಬೇಕು. ಇದು ಒಂದು ತರ್ಕ! ಅಹಿಂಸೆಯಿಂದ ನಮಗೆ ಬಲ ಅಳೆಯಲು ಬಾರದು. ಅಹಿಂಸಕನ ಬಲವಾದರೂ ಅಷ್ಟೆ. ಅವನು ತಾನಾಗಿ ಏನೂ ಮಾಡುವುದಿಲ್ಲ; ಅವನ ಪ್ರೇರಕ ದೇವರು. ದೇವರ ಪ್ರೇರಣೆ ನಾಳೆ ಏನಾದೀತೋ ಅವನೇನು ಬಲ್ಲ ? ಅಂತೆಯೆ ಇಲ್ಲಿ ಆಪದ್ಧರ್ಮ (Compromise) ದ ಮಾತೇ ಇಲ್ಲ. ಸಾಮರ್ಥ್ಯ ಪರೀಕ್ಷೆ. ಹೆದರಿಕೆಯಿಂದ ಹಾವನ್ನು ಕೊಂದರೆ ಅದು ಆಪದ್ಧರ್ಮವಲ್ಲ; ನನ್ನ ದೌರ್ಬಲ್ಯದ ಪ್ರದರ್ಶನ. ಇದಕ್ಕಿಂತ ಹೆಚ್ಚು ಸಾಮರ್ಥ್ಯವನ್ನು ದೇವರು ನನಗೆ ಕೊಡಲಿಲ್ಲ, ಅಥವಾ ಅಂಥ ಶಕ್ತಿಯನ್ನು ಪಡೆಯಲು ನಾವು ಸಾಕಷ್ಟು ತಪಸ್ಸನ್ನೂ ಮಾಡಿಲ್ಲ, ಶುದ್ಧಿಯೂ ಇಲ್ಲ. ಮನುಷ್ಯ ತಿಳಿದು ಮಾಡಿದುದು ಆಪದ್ಧರ್ಮ.

ಪೂರ್ಣ ಸತ್ಯಾಗ್ರಹಿ ಎಂದರೆ ಪರಮಾತ್ಮನ ಪೂರ್ಣಾವತಾರ. ಅಂಥ ಪೂರ್ಣಾವತಾರ ಜಗತ್ತನ್ನೇ ಅಲ್ಲಾಡಿಸಿ ಬಿಟ್ಟೀತು ಅನಿಸುತ್ತದೆಯಲ್ಲವೆ ನಿನಗೆ. ಈ ಪ್ರಪಂಚವೇ ಅಂಥ ಅವತಾರ ನಿರ್ಮಾಣದ ಪ್ರಯೋಗ ಶಾಲೆ; ಈ ಮಾತಿನಲ್ಲಿ ಅತಿಶಯೋಕ್ತಿ ಎಳ್ಳಷ್ಟೂ ಇಲ್ಲ. ಅಂಶಮಾತ್ರವಾದರೂ ನಾವೆಲ್ಲರೂ ಆ ಸಿದ್ಧತೆ ಉಂಟುಮಾಡಿಕೊಂಡರೆ ಎಂದಾದರೂ ಆ ಅವತಾರ ಪ್ರಕಟವಾದೀತು. ಹೀಗೆ ನಾವು ನಂಬಬೇಕು. ಎಂದರೆ ಇನ್ನು ಮುಂದೆ ಸೇನೆಯ ಬಗ್ಗೆ ನೀನು ಪ್ರಶ್ನೆ ಕೇಳಲಿಕ್ಕಿಲ್ಲ.

ಸರಕಾರ ಒಂದು ಯಂತ್ರ. ಅದನ್ನು ನಡಸುವ ಯಾಂತ್ರಿಕರೂ ಇದಾರಲ್ಲ.†

ಅಶ್ಲೀಲವಲ್ಲದ ಸಂಗೀತ, ನೃತ್ಯಗಳನ್ನು ನೋಡುವುದು ತಪ್ಪಲ್ಲ. ಆದರೆ ಯಾರೋ ದುಡ್ಡುಕೊಟ್ಟು, ನಾವು ನೋಡಲು ಹೋಗುವುದು ತಪ್ಪು. ಒಬ್ಬರಿಗಾದರೆ ಯಾರಾದರೂ ಕೊಟ್ಟಾರು. ಎಲ್ಲರಿಗೂ ಯಾರು ಕೊಟ್ಟಾರು? ನಾವಂತೂ ಅನೇಕರು. ಇಂಥ ಮಾತಿನಲ್ಲಿ ಎಲ್ಲರೂ ತಮ್ಮ ತಮ್ಮ ಯೋಗ್ಯತೆಯನ್ನು ಅನುಸರಿಸಿ ನಡೆಯಬೇಕು.

ಬಾವಿಗಳ ನಿರ್ಮಲತೆ ದೊಡ್ಡ ಪ್ರಶ್ನೆ. ಮೆಟ್ಟಲು ತೆಗೆದು ಬಿಟ್ಟರೆ ದೊಡ್ಡ ಕೆಲಸವಾದೀತು.

ಎಣ್ಣೆ ತೆಗೆಯುವ ವಿಧಾನ ಬರೆದು ತಿಳಿಸು; ಮಾಡಿ ನೋಡುತ್ತೇನೆ.

......ಯನ್ನು ಪರೀಕ್ಷಕಿಯಾಗಿ ನೇಮಿಸಿದಾರೆ. ಅದರ ಗೌರವಧನವನ್ನು ಆಕೆಗೆ ಕೊಡಬೇಕು. ಪ್ರಶ್ನಪತ್ರಿಕೆ ಸುಲಭವಾಗಿರಲಿ. ಹೆಂಗಸರ ಮಾಸಿಕಧರ್ಮದ ವಿಷಯವಾಗಿ ನಾನು ಬರೆದದ್ದರಲ್ಲಿ ಏನೂ ತಪ್ಪಿಲ್ಲ. ಅಂಥ ನಿರ್ವಿಕಾರತೆ ಬರಲು ಬಹಳ ಕಾಲಬೇಕು. ವಿಕಾರ ಬಹಳ ಸೂಕ್ಷ್ಮ; ಅದನ್ನು ಗುರುತಿಸಲು ನಮಗೆ ಯಾವಾಗಲೂ ಸಾಧ್ಯ ಎನ್ನುವಂತಿಲ್ಲ. ‡

ಜವಾಹರಲಾಲರ ಬಿಡುಗಡೆಗಾಗಿ ಯೂರೋಪಿನಲ್ಲಿ ಪ್ರಯತ್ನ ವಾಗುತ್ತಿರುವುದು ಸರಿ.

ಕೇಂದ್ರ ಶಾಸನ ಸಭೆಯ ಅಭಿಮತಕ್ಕೆ Vote ಮನ್ನಣೆಯಿಲ್ಲವೆಂದು ನನಗೆ ನಿರಾಶೆಯಿಲ್ಲ. ಈ ಹಣೆಯಬರಹ ನನಗೆ ಗೊತ್ತೇ ಇತ್ತು. ಶಾಸನ ಸಭಾ ಪ್ರವೇಶ ಅವಶ್ಯಕವಾಗಿತ್ತು; ಈಗಲೂ ಅವಶ್ಯಕವಾಗಿದೆ.

ಹಿಂದೂ ಮುಸ್ಲಿಮ್ ಐಕ್ಯದ ವಿಷಯದಲ್ಲಿ ನಾನು ಮೂಕನಾಗಿ ದೇನೆ. ಆ ವಿಷಯದಲ್ಲಿ ನಾನು ಏನೂ ಮಾಡಲಾರೆ; ಅಸಮರ್ಥನಾಗಿದೇನೆ.

---

† ಸರಕಾರ ಯಂತ್ರ. ಅದಕ್ಕೆ ಹೃದಯವಿದ್ದರೆ ಅಲ್ಲವೆ ಪರಿವರ್ತನೆ? ಎಂಬ ಪ್ರಶ್ನೆಗೆ ಉತ್ತರ.

‡ ನಿರ್ವಿಕಾರ ಸ್ತ್ರೀಯ ಮಾಸಿಕಧರ್ಮ ನಿಂತೀತು ಎಂದು ಮಹಾತ್ಮಾಜೀಯ ಅಭಿಪ್ರಾಯ.

ಗಜೇಂದ್ರ ನಿರ್ವಿಣ್ಣನಾದಾಗ ಮೂಕನಾಗಿ ಪ್ರಾರ್ಥನೆ ಮಾಡಿದ. ಅವನ ಪ್ರಾರ್ಥನೆ ಸಫಲವಾಯಿತು. ನನ್ನ ಪಾಡೂ ಗಜೇಂದ್ರನಹಾಗೆಯೇ. ನನ್ನ ಪ್ರಾರ್ಥನೆಯೂ ನಡದಿದೆ. ವಿಮೋಚನೆಯಾದಾಗಲೇ ನಿಜ. ಅದರ ಕಾಲನಿರ್ಣಯವನ್ನೂ ಅರಿತುಕೊಳ್ಳುವ ಹಂಬಲ ಅನಾಸಕ್ತನಿಗೇಕೆ?

ಇಲ್ಲಿರುವವರಲ್ಲಿ ಹೊಸಬರೇ ಹೆಚ್ಚು. ಭೋಜನ ಶಾಲೆ ಬಹಳ ಸಾದಾ ಆಗಿಬಿಟ್ಟಿದೆ. ಅಡಿಗೆಯೆಲ್ಲ ಉಗಿಯ ಮೇಲೆ. ಒಂದೇ ದೊಡ್ಡ ಕೊಳಗದಲ್ಲಿ ಮೂರು ಪಾತ್ರೆಗಳನ್ನೂ ಇಡುತ್ತಾರೆ. ಇದರಿಂದ ವೇಳೆ ಬಹಳ ಉಳಿಯುತ್ತದೆ. ಈಗ ಅಡಿಗೆಯೆಂದರೆ ಚಪಾತಿ ಪೂರ್ತಾ. ಅದನ್ನು ಕೂಡಾ ಸುಲಭಗೊಳಿಸುವ ಪ್ರಯತ್ನ ಮಾಡುತ್ತಿದ್ದೇವೆ. ಎಣ್ಣೆಯ ಗಾಣ ನಡೆದಿದೆ. ನೆರೆಯ ಹಳ್ಳಿಯಲ್ಲಿ ಬೀದಿ ಚೊಕ್ಕಟವಾಗಿಡುವ ಪ್ರಯತ್ನ ನಡದಿದೆ. ನಾನು ಒಂದೇ ಸಲ ಹೋಗಿದ್ದೆ. ಮಹದೇವ ಮಾತ್ರ ದಿನವೂ ಹೋಗುತ್ತಾನೆ.

೫-೪-೩೫

ಬಾಪೂನ ಆಶೀರ್ವಾದ

## ೭೮

ಈ ಹೊತ್ತು ನನ್ನ ಮೌನದ ಕೊನೆಯ ದಿನ. ಹಾಗೇ ಉಳಿದು ಬಿಟ್ಟಿದ್ದ ಎಷ್ಟೋ ಕೆಲಸ ಈ ಸಮಯದಲ್ಲಿ ಮುಗಿದು ಹೋಯಿತು.

ಅಕ್ಕಿ, ಬೆಲ್ಲ, ನೀರುಳ್ಳಿಗಳನ್ನು ತಿನ್ನಲು ಬಲಾತ್ಕಾರವಿಲ್ಲ. ಜನರು ಬಳಸುವ ಪದಾರ್ಥಗಳ ಗುಣದೋಷಗಳನ್ನು ಮಾತ್ರ ನಾನವರಿಗೆ ತಿಳಿಸುತ್ತೇನೆ. ಹಸೀಪಲ್ಯದ ಜೊತೆಗೆ ಹುಣಿಸೆಹುಳಿಯನ್ನು ತಿನ್ನುತ್ತೇನೆ. ಹುಣಿಸೆ ನೀರಲ್ಲಿ ಕಿವುಚಿ ಸಾರ ತೆಗೆಯುತ್ತೇನೆ. ಹಸಿಪಲ್ಯ ಅರೆದು ತಿನ್ನುತ್ತೇನೆ.

ಹಳ್ಳಿಯವರ ಆಹಾರದಲ್ಲಿ ನೀರುಳ್ಳಿ ಪ್ರಧಾನವಸ್ತು. ಅವರು ಬಳಸುವ ತರಕಾರಿಯಲ್ಲಿ ಇದೇ ಬಹಳ ಬೆಲೆಯಾದದ್ದು. ನೀರುಳ್ಳಿಯಿದ್ದರೆ ತುಪ್ಪ ಬೇಕಾಗುವುದಿಲ್ಲ. ಪ್ರಯೋಗಕ್ಕಾಗಿ ನಮ್ಮ ಪಟ್ಟಿಯಲ್ಲಿ ಸೇರಿಸಿದೇನೆ. ಇಷ್ಟ ಬಂದವರು ತಿನ್ನುತ್ತಾರೆ. ಇದೂ ಒಂದು

ಔಷಧ ಎಂದು ನೀರುಳ್ಳಿ ತಿಂದವರಿಗೆ ಬ್ರಹ್ಮಚರ್ಯಕ್ಕೆ ಅದು ಬಾಧಕವಾಗದು. ಹೀಗನ್ನಲು ಆಧಾರ ಮಾತ್ರ ನನ್ನಲ್ಲಿ ಏನೂ ಇಲ್ಲ.

ಲಾಠೀ ಶಿಕ್ಷಣದಿಂದ ಅಹಿಂಸಾವೃತ್ತಿ ಸಡಿಲಾಗುವ ಸಂಭವ ಇದೆ. ಲಾಠೀ ಶಿಕ್ಷಣ ಆತ್ಮರಕ್ಷಣೆಗೆ. ಆದರೆ ಇದನ್ನು ಉಪಯೋಗ ಮಾಡದಂತೆ ನಿರ್ಬಂಧ ಹಾಕುವ ಇಚ್ಛೆ ಅವರಿಗಿಲ್ಲ.

ಬಿಳಿ ಖಾದಿಯ ಬದಲು ಬಣ್ಣದ ಖಾದಿ ತೊಡಬಾರದೆಂದು ನಾನು ಬರೆದಿಲ್ಲ. ಹಾಗೆ ಬರೆದಿದ್ದರೆ ಅದು ತಪ್ಪು.

ಸ್ವರಾಜ್ಯ ದೊರೆತ ಮೇಲೆ ಅನೇಕ ವಿಷಯ ಬದಲಾದಾವು. ಸಂಸ್ಥಾನಗಳ ವಿಷಯ ಈಗೇನು ಹೇಳುವುದೂ ಕಷ್ಟ. ಸಾಮಾನ್ಯವಾಗಿ ಸಂಸ್ಥಾನದ ಶಕ್ತಿಗೆ ಸ್ವರಾಜ್ಯ ತಂತ್ರ ವಿರೋಧವಾಗಲಾರದು.

ಕಮ್ಮಾರ, ಅಕ್ಕಸಾಲಿಗರನ್ನು ವೈಶ್ಯರೆಂದು ತಿಳಿಯಬೇಕು. ನಾಳೆ ಇಂದೂರಿಗೆ ಹೋಗುತ್ತೇನೆ. ಅಲ್ಲಿಂದ ಬರುವುದು ತಿಕ್ಕೆ.

ವರ್ಧಾ, ೧೮-೪-೩೫

**ಬಾಪೂನ ಆಶೀರ್ವಾದ.**

## ೭೯

ಅರವಿಂದ ಬಾಬುಗಳ ವಿಷಯವಾಗಿ ನಾನೇನನ್ನೂ ಹೇಳಲಾರೆ. ಕೊಬ್ಬುತುಂಬಿದ ಮೈಯಲ್ಲಿ ಜ್ಞಾನವಿಲ್ಲ, ಒಣಕಲು ಮೈಯಲ್ಲಿ ಜ್ಞಾನ ತುಂಬಿದೆ ಎಂದು ಹೇಗೆ ಹೇಳುವುದು? ನನ್ನ ದಾರಿ ನನಗನುಕೂಲ. ಇಷ್ಟೇ ನಾನು ಹೇಳಬಹುದು. ಜಗತ್ತಿಗೆ ನಾವು ನ್ಯಾಯಾಧೀಶರಾಗಬಾರದು. ಇಷ್ಟು ಮಾತ್ರ ಹೇಳಬಹುದು. ಅರವಿಂದ ಬಾಬುಗಳ ಸಹವಾಸದಿಂದ ಅವರ ಸುತ್ತಲಿರುವ ೨೦೦ ಜನರ ಬಾಳಿನಲ್ಲಿ ದೊಡ್ಡ ಬದಲಾವಣೆಯಾಗಿದೆ. ಪ್ರತಿಯೊಬ್ಬನೂ ತನ್ನ ಪ್ರಕೃತಿಯನ್ನು ಅನುಸರಿಸುತ್ತಾನೆ.

ಪಾಶ್ಚಿಮಾತ್ಯರಲ್ಲಿ ವೈಯಕ್ತಿಕ ಜೀವನಕ್ಕೆ ಬೆಲೆಯಿಲ್ಲ ಎಂಬುದು ಪೂರಾ ನಿಜವಲ್ಲ. ನಮ್ಮಲ್ಲಿಯೂ ಎಲ್ಲರೂ ಅದಕ್ಕೆ ಬಹಳ ಗಮನಕೊಡುತ್ತಾರೆಂಬುದು ನಿಜವಲ್ಲ. ಇದು ಅವಶ್ಯಕ ಎಂದು ನಾವು ತಿಳಿದಿದ್ದೇವೆ.

ಇಷ್ಟೇ ಅಲ್ಲ, ಅಂತಃಶುದ್ಧಿಯಿಲ್ಲದೆ ಬರೀ ಬುದ್ಧಿಯಿಂದ ಮಾಡಿದ ಕೆಲಸ ಒಳ್ಳೆಯದೇ ಆದರೂ, ಬಹಳಕಾಲ ನಿಲ್ಲದು ಎಂದು ತಿಳಿಯುತ್ತೇವೆ. ತಾತ್ಕಾಲಿಕ ಪರಿಣಾಮದಿಂದ ಕೆಲಸದ ಬೆಲೆ ಕಟ್ಟಬಾರದು. ನೀತಿಗೆ ಸಂಬಂಧವಿಲ್ಲದ ಕೆಲಸಕ್ಕೆ ಅಂತಃಶುದ್ಧಿಬೇಕಿಲ್ಲ. ಬಡಗ ಹೊರಚಾಳಿಯವನಾದರೂ ಮೇಜು ಕುರ್ಚಿ ಸರಿಯಾಗಿಯೇ ಮಾಡಬಲ್ಲ. ಆದರೆ ಅಂತಃಶುದ್ಧಿಯಿಲ್ಲದೆ ಅಸ್ಪೃಶ್ಯತೆ ಬಿಡಲಾರ; ರಾಟೆ ಹಿಡಿಯಲು ಅವರ ಮನಸ್ಸೊಲಿಸಲಾರ. ಇವೆರಡಕ್ಕೂ ಅಂತಃಕರಣಬೇಕು. ಇಂಥ ಕೆಲಸಕ್ಕೆ ವೇಳೆಯ ಲೆಕ್ಕ ಹಾಕಬಾರದು. ಸತ್ಯದಲ್ಲಿ ನಿಷ್ಠೆಯಿಟ್ಟು ಮಾಡಿದ ಕೆಲಸಕ್ಕೆ ವಿಶಿಷ್ಟಫಲ ಆಗಲೇಬೇಕು. ಇಷ್ಟು ನಂಬಿಗೆಯಿರದಿದ್ದರೆ ನೀತಿಪಾಲನೆಯೇ ನನಗೆ ಸಾಧ್ಯವಲ್ಲ.

ಕಲ್ಪನಾತೀತ ಎಂದು ನಾವು ಭಜಿಸುವ ದೇವರೇ ಕಲ್ಪನೆ. ನಿಜವಾದ ದೇವರನ್ನು ಯಾರೂ ನೋಡಿಲ್ಲ. ನೋಡಿದವರಿಗೂ ವರ್ಣನೆ ಮಾಡಲು ಆಗಿಲ್ಲ. ಯಾವ ಸ್ವರೂಪ ನನಗೆ ಇಷ್ಟವೋ ಹೇಳಲಾರೆ. ನಾನು ಪೂಜೆ ಮಾಡುವ ಸ್ವರೂಪದ ಹೆಸರು ಸತ್ಯ, ಅದು ಅಮೂರ್ತ; ಅನೇಕ ರೀತಿಯಲ್ಲಿ ಪ್ರಕಟವಾಗಿದೆ. ಅಪೂರ್ಣನಿಗೆ ಪೂರ್ಣಸ್ವರೂಪ ಕಾಣಬೇಕಾದರೂ ಹೇಗೆ?

ಖಾದೀ ಬರಲಿ, ಉಪಯೋಗ ಮಾಡುತ್ತೇನೆ. ಇಗಕ್ಕೆ ಈ ಊರು ಬಿಟ್ಟು ಎಕ್ಕೆ ವರ್ಧಾ ಮುಟ್ಟುವ ವಿಚಾರವಿದೆ.

ಬೋರ್ಸದ್, ೨೮-೫-೩೫

ಬಾಪೂನ ಆಶೀರ್ವಾದ

## ೮೦

ನಿನ್ನ ಚೆಂದವಾದ ಕಾಗದಕ್ಕೆ ಕೂಡಲೇ ಬದಲು ಬರೆಯಲಾಗಲಿಲ್ಲ, ಬಲಗೈಗೆ ವಿಶ್ರಾಂತಿ ಅಗತ್ಯವಾಗಿ ಬಿಟ್ಟಿದೆ. ಇದರಿಂದ ಕೆಲಸ ಮುಗಿಯುವುದಿಲ್ಲ.

ಭೂಕಂಪಕ್ಕೂ ಪಾಪಕ್ಕೂ ಸಂಬಂಧವೇನು ಎಂಬುದನ್ನು ಹರಿಜನದಲ್ಲಿ ಬರೆದಿದೇನೆ. ಓದು. ಅದರಿಂದ ಬಿಹಾರಿನಲ್ಲಿ ಯಾರಿಗೂ ಸಿಟ್ಟು

ಬರಲಿಲ್ಲ. ಇದು ತಮ್ಮ ಪಾಪಫಲ ಎಂದೇ ತಿಳಿದಿದ್ದರು. ಐಕ್ಯದ ಸಿದ್ಧಾಂತದೊಳಗಿಂದಲೇ ಇದು ಹುಟ್ಟುತ್ತದೆ. ಹಾವಿನ ವಿಷಯವನ್ನು ಹರಿಜನದಲ್ಲಿ ಬರೆದಿದ್ದೇನೆ. ಅದನ್ನು ಓದು. ಇತ್ತೀಚಿನ ಹರಿಜನ ನೋಡು. ನಿನ್ನ ಕಡೆ ಬರುತ್ತದೆ ತಾನೆ?

ಬಹಳ ಕಾಯಿಲೆ ಬಿದ್ದು, ಎಷ್ಟೋ ಆರೈಕೆ ಮಾಡಿದರೂ ಆ ಕಾಯಿಲೆ ಗುಣವಾಗುವ ಸಂಭವವೇ ಇಲ್ಲದಿದ್ದರೆ ಅಂಥ ಗಂಡ ಸಾಯಲಿ ಎಂದು ಹೆಂಡತಿ ಬಯಸಿದರೆ ಅದು ಪಾಪವಲ್ಲ. ಆವನಿಗೆ ಪ್ರಜ್ಞೆಯಿದ್ದರೆ ಅವನನ್ನು ಕೇಳಬೇಕು. ಎಷ್ಟು ನೋವಾದರೂ ಬದುಕಿಕೊಂಡಿರಬೇಕೆಂದು ಅವನಿಗನಿಸಿದರೆ ಹಾಗೆಯೆ ಮಾಡಬೇಕು. ಬಂಡವಾಳಗಾರರು ತಮ್ಮ ಆಸ್ತಿಗೆ ತಾವೇ ಪಂಚರಾಗಬೇಕು, ಧರ್ಮಾಧಿಕಾರಿಗಳಾಗಬೇಕು ಎಂದರೆ-ತಮಗಾಗಿ ಒಂದು ಪಾಲು ತೆಗೆದಿಟ್ಟುಕೊಂಡು ಉಳಿದ ಆದಾಯವನ್ನೆಲ್ಲ ಬಡವರಿಗಾಗಿ, ಸರಕಾರಕ್ಕೊ ಅಥವಾ ಲೋಕೋಪಕಾರಕ ಸಂಸ್ಥೆಗೋ ಕೊಡಬೇಕು ಎಂದರ್ಥ. ಎಲ್ಲರೂ ಎಲ್ಲವನ್ನೂ ಸರಕಾರಕ್ಕೆ ಕೊಟ್ಟರೆ ವೈಯಕ್ತಿಕ ಸಾಹಸಕ್ಕೆ ಎಡೆಯಿಲ್ಲದಾಗುತ್ತದೆ. ಅದರಿಂದ ಮನುಷ್ಯ ಜಡಯಂತ್ರವಾಗುತ್ತಾನೆ.

ಧನಿಕರೊಡನೆ ನನ್ನ ಸಂಬಂಧ ಇದ್ದೇ ಇರುತ್ತದೆ. ಅವರೇನು ದುಷ್ಟರಲ್ಲ, ಬಡವರೇನು ದೇವತೆಗಳೂ ಅಲ್ಲ. ಪರೋಪಕಾರಾರ್ಥವಾಗಿ ಧನಗಳಿಸುವ ಶ್ರೀಮಂತರು ಇಲ್ಲೂ ಉಂಟು, ಪಶ್ಚಿಮದಲ್ಲೂ ಉಂಟು. ಅವರು ಪೂಜನೀಯರು. ಯಾರ ಸಹವಾಸ ತ್ಯಾಜ್ಯವೋ ಅಂಥ ಬಡವರು ಅನೇಕರನ್ನು ನಾನು ಬಲ್ಲೆ. ಸ್ವರಾಜ್ಯದಲ್ಲಿ ಕುರಿ, ತೋಳ ಎರಡೂ ಒಟ್ಟಿಗೆ ಒಂದೇ ಮಡುವಿನಲ್ಲಿ ನೀರು ಕುಡಿಯುತ್ತಿರುವುದು ಕಂಡೀತು. ಹೀಗಿದೆ ನನ್ನ ಕಲ್ಪನೆ. ಇದು ಕಲ್ಪನೆಯಾದ ಮಾತ್ರಕ್ಕೆ ಏನಾಯಿತು? ನನಗೆ ಏನುಬೇಕೋ ಅದು ಕೂಡ ನನಗೆ ತಿಳಿಯದಿದ್ದರೆ ಪ್ರಯತ್ನ ಯಾವುದಕ್ಕಾಗಿ ಮಾಡಬೇಕು?

ಜನರ ಸ್ವಭಾವ ನನಗೆ ಸರಿಯಾಗಿ ಗೊತ್ತಾಗುವುದಿಲ್ಲ ಎಂಬ ಮಾತು ನಿಜ. ಆದರೆ 'ನನಗೆಲ್ಲ ಗೊತ್ತಿದೆ' ಎನ್ನುವವರಿಗಾದರೂ

ಸರಿಯಾಗಿ ತಿಳಿಯುತ್ತದೆಯೇನು? ನನ್ನ ಅಜ್ಞಾನವನ್ನೂ ಕಂಡು ನನಗೆ ದುಃಖವಿಲ್ಲ. ಜನರ ಸ್ವಭಾವ ಗೊತ್ತಾಗದ್ದರಿಂದಲೇ ನಾನು ಅವರನ್ನು ನಂಬಲು ಸಾಧ್ಯವಾಗುತ್ತದೆ.

ಯಾರಾದರೂ ನನ್ನ ವಿಷಯವಾಗಿ ನಿನ್ನನ್ನು ಕೇಳಿದರೆ ಉತ್ತರ ಕೊಟ್ಟೇ ತೀರಬೇಕೆಂದು ಎಲ್ಲಿದೆ? "ನಾನು ಉತ್ತರ ಕೊಡಲಾರೆ. ನನಗೆ ಅವರ ಕೆಲಸ, ಅವರ ವಿಚಾರ ರುಚಿಸುತ್ತದೆ. ನಮ್ಮ ರುಚಿಗಳಿಗೆಲ್ಲ ನಾವು ಕಾರಣ ತೋರಿಸಲು ಸಾಧ್ಯವೆ? ಏನಾದರೂ ಕೇಳಬೇಕಾಗಿದ್ದರೆ ಅವರನ್ನೇ ಕೇಳಿರಿ" ಎಂದೇಕೆ ಹೇಳುವುದಿಲ್ಲ? ಹೀಗೆ ಉತ್ತರಕೊಟ್ಟರೆ ಎಷ್ಟೋ ಜಂಜಡ ತಪ್ಪೀತು. ನನ್ನಿಂದ ನೀನೇನಾದರೂ ಕಲಿತಿದ್ದರೆ, ನೀನು ಅದನ್ನು ಅರಗಿಸಿಕೊಂಡಿದ್ದ ಪಕ್ಷದಲ್ಲಿ ಇತರರಿಗೂ ಹೇಳಿಕೊಡು. ನಾವು ಅರಗಿಸಿ ಕೊಂಡದ್ದು ನಮ್ಮದೇ; ಪರರದಲ್ಲ. ಇದಕ್ಕೆ ಸಂಶಯವಿಲ್ಲ. ಅದರ ವಿಷಯವಾಗಿ ಉತ್ತರ ಹೇಳಲು ನಮಗೆ ಬರಲೇ ಬೇಕು.

ವರ್ಧಾ, ೨೧-೬-೩೫

**ಬಾಪೂನ ಆಶೀರ್ವಾದ.**

## ೮೧

ಪತ್ರವ್ಯವಹಾರ ಮುಗಿಸಬೇಕೆಂದು ಈ ಹೊತ್ತು ಎರಡೂವರೆ ಗಂಟೆ ಮೌನ ಹಿಡಿದಿದೇನೆ. ಒಂದರ ಮೇಲೊಂದು ಕಾಗದ ಬರೆದು ಹಾಕುತ್ತಿರುವಾಗ ನಿನ್ನ ಕಾಗದ ಕೈಗೆ ಸಿಕ್ಕಿದೆ.

ಹಿಟ್ಲರನ ಬಗ್ಗೆ ಮತ್ತೇನು ಪುಸ್ತಕ ಇವೆ?

ಇನ್ನು ನಿನ್ನ ಪ್ರಶ್ನೆ. ರಷ್ಯಾದ ದೃಷ್ಟಾಂತ ಇದುರಿಗಿಟ್ಟುಕೊಳ್ಳು ವುದರಲ್ಲಿ ಅಪಾಯವಿದೆ. ಒಂದು; ನಮಗೆ ಅದರ ಅನುಭವವಿಲ್ಲ; ಎರಡು ಇನ್ನೂ ಬಹಳ ದಿನವಾಗಿಲ್ಲ; ಮೂರು, ಅಲ್ಲಿ ನಡದದ್ದೆಲ್ಲ ಬಲಾತ್ಕಾರ ದಿಂದ. ಅಂತೇ ನಾವೇನೇ ವಿಚಾರ ಮಾಡಿದರೂ ರಷ್ಯಾ ಬಿಟ್ಟೇ ಮಾಡ ಬೇಕು. ಹಿಂಸೆಯಿಂದ ಏನೂ ಸಾಧ್ಯವಲ್ಲ ಎಂಬ ನಿರ್ಧಾರಕ್ಕೆ ನಾವು ಬಂದಿದ್ದೇವೆ. ಹಿಂಸೆಯಿಂದ ಏನೂ ಮಾಡುವಂತಿಲ್ಲ, ಏನೂ ಮಾಡಿಸು ವಂತಿಲ್ಲ ಎಂಬ ನಿರ್ಧಾರ ಅನಿವಾರ್ಯ. ಹಣವಂತರನ್ನು ನ್ಯಾಯಮಾರ್ಗ ದಲ್ಲಿ ನಡೆಯಿಸುವ ಸುಲಭೋಪಾಯ ಇದು. ಅವರು ಗಳಿಸಿದ ಹಣ

ಉತ್ತಮೋತ್ತಮ ಕಾರ್ಯಕ್ಕೆ ವೆಚ್ಚವಾದರೆ ಅವರು ನ್ಯಾಯವಾಗಿ ನಡೆದಂತೆ. ಹೀಗಾದರೆ ಅವರು ಹಣಗಳಿಸುವ ಮೋಹವನ್ನೇ ಬಹಳ ಮಟ್ಟಿಗೆ ಬಿಡಲೂ ಬಹುದು. ಬಿಡದಿದ್ದರೆ ಒಳಿತು, ಬಿಟ್ಟರೂ ತೊಂದರೆಯಿಲ್ಲ. ಅದರ ಬದಲು ಇಷ್ಟು ಹಣಗಳಿಸಿ ಅದನ್ನು ಕಾಪಾಡುವ ಚಿಂತೆಯಿಲ್ಲದೆ ವಿನಿಯೋಗ ಮಾಡುವುದೊಂದೇ ಉಳಿಯುತ್ತದೆಯಲ್ಲ. ಹಣವಂತರೆಲ್ಲ ತಮ್ಮ ಸೊತ್ತಿಗೆ ತಾವೇ ಪಂಚರಾದರೆ ನಮ್ಮ ಉಪದೇಶವೇಕೆ? ಹಣವಂತರೆಂದಾದರೂ ಹಾಗೆ ಮಾಡಬಲ್ಲರೆ? ಎಂದಿಗೂ ಇಲ್ಲ ಎಂಬ ಸಂಶಯ ನಿನ್ನ ಯುಕ್ತಿವಾದದಲ್ಲಿದೆ. ಈ ಸಂಶಯ ನಿಜವಾದರೂ ಪರವಾಯಿಲ್ಲ. ಕೊನೆಗಂತೂ ಸತ್ಯಕ್ಕೆ ಗೆಲವು ಕಟ್ಟಿಟ್ಟಿದ್ದೇ. ಬೇಕಾದುದಕ್ಕಿಂತ ಹೆಚ್ಚಿಗೆ ಸೊತ್ತು ಸಂಗ್ರಹ ಮಾಡುವವನು ಕಳ್ಳ. ಕಳವಿನ ಹಣ ಅಶುದ್ಧ ಪಾದರಸದಂತೆ ಎಂದಿಗೂ ದಕ್ಕಲಾರದು. ಕಳ್ಳನ ಆಸ್ತಿಯಾಗಿ ಎಂದೂ ಉಳಿಯಲಾರದು. ಇದನ್ನು ನಂಬಿ ನಾವಂತೂ ನಮ್ಮ ಅಹಿಂಸಕೋಪಾಯಗಳನ್ನೇ ಅವಲಂಬಿಸಬೇಕು.

ಇಷ್ಟರಿಂದಲೂ ಸಮಾಧಾನವಾಗಿರದಿದ್ದರೆ ಮತ್ತೆ ಕೇಳು. ನೀನು ಕೇಳಿದ್ದು ಬಹಳ ಮಹತ್ವದ ವಿಷಯ. ಅಹಿಂಸೆಯ ಅರ್ಥ ನಿನಗೆ ಪೂರ್ಣವಾಗಿ ಗೊತ್ತಿದ್ದರೆ ನನ್ನ ಉತ್ತರ ಕೂಡ ಪೂರ್ಣವೆನಿಸಬೇಕು.

ವರ್ಧಾ, ೧೩–೮–೩೫

**ಬಾಪೂನ ಆಶೀರ್ವಾದ.**

## ೮೨

ಹೊತ್ತಿಗೆ ಸರಿಯಾಗಿ ಬಂತು ರಾಖೀ. ಜುನ್ನರ್ * ಕೈಕಾಗದ ಒಂದವು; ಚೆನ್ನಾಗಿವೆ. ಖಾದೀ ತಲಪಿತು, ಬಳಸುತ್ತೇನೆ. ನಾನು ನೂತ ನೂಲು ಕೂಡ ಬಹಳ ಸಂಗ್ರಹವಾಗಿದೆ. ಅದರ ಮೇಲೆ ಅನೇಕರ ಕಣ್ಣಿದೆ. ನಾನು ತೆಗೆಯುವ ನೂಲಾದರೂ ಎಷ್ಟು? ೧೬೦ ಎಳೆ ತೆಗೆದರೆ, ಆ ಹೊತ್ತು ದೀವಳಿಗೆ! ಅನೇಕ ಬಗೆಯ ದೇಶೀ ಗಲಗು ಇವೆ ಅನಿಸು

* ಜುನ್ನರ್ ಕೈಗಿರಣಿಯ ಕಾಗದ. ಬೆಳಗಾಂವಿ ಜಿಲ್ಲೆಯ ಖಾನಾಪುರದ ಕಾಗದ ಗಿರಣಿಯಂಥದು.

ತ್ತದೆ. ನಾನು ಬರೆಯುವ ಗಲಗು ನಮ್ಮಲ್ಲಿದೆ ಎನ್ನುತ್ತಾರೆ. ಪರೀಕ್ಷಿಸಿ ನೋಡಬೇಕು.

ನನ್ನ ವಿಚಾರಸರಣಿಯಲ್ಲಿನ ಒಂದು ಮಾತನ್ನು ನೀನು ಗಮನಿಸಿದರೆ ನಿನಗೆಲ್ಲ ತಿಳಿದೀತು. ನನ್ನ ತಟಸ್ಥವೃತ್ತಿಯು ಫಲಪ್ರಾಪ್ತಿಯ ಕಾಲದ ಬಗ್ಗೆ ಆ ಮಾತು; ಕಾರ್ಯದ ಬಗ್ಗೆ ಅಲ್ಲ; ಫಲಪ್ರಾಪ್ತಿಯ ಬಗ್ಗೆಯೂ ಅಲ್ಲ. ಧನವಂತರು ಧನವನ್ನು ಬಿಡಲಿ, ಬಿಡದಿರಲಿ ಎಂದು ಹೇಳಿದ್ದರಲ್ಲಿ ಆ ವಿಷಯವಾಗಿ ನಿರ್ಲಕ್ಷ್ಯವಲ್ಲ, ನಿಶ್ಚಿಂತತೆ. ಇಟ್ಟ ಹೆಜ್ಜೆ ಸರಿಯಾಗಿದ್ದರೆ ಇಂದಲ್ಲ ನಾಳೆ, ಫಲವಾಗಲೇ ಬೇಕು.

ಮಂಗನಿಂದ ಮನುಷ್ಯ ನಿರ್ಮಾಣವಾಯಿತು ಎಂಬ ಮಾತು ನನ್ನ ಗಂಟಲೊಳಗೆ ಇಳಿಯದು. ಮಾನವದೇಹಧಾರಿಯಾದ ಜೀವ ಮಂಗನ ಮೈಯನ್ನೂ ಹೊಕ್ಕಿದ್ದೀತು. ಈ ವಿಷಯದಲ್ಲಿ ನನಗೆ ಸಂಶಯವಿಲ್ಲ.

ಆತತಾಯಿಯನ್ನು ಕೊಲ್ಲುವುದು ನನಗೆ ಸಮ್ಮತವಿಲ್ಲ. ಯಾರು ಆತತಾಯಿ ?

ಕೊಲೆಪಾತಕಿಯನ್ನು ಕೂಡ ಜೇಲಿನಲ್ಲಿಡಬೇಕು ಅನಿಸುವುದಿಲ್ಲ ನನಗೆ. ಆದರೆ ಇದನ್ನು ಅಹಿಂಸೆಯೆಂದಿಲ್ಲ ನಾನು. ಈಗಿನ ಪರಿಸ್ಥಿತಿಯಲ್ಲಿ ಅದು ಅನಿವಾರ್ಯ ಎಂದಿದ್ದೇನು. ಅದರರ್ಥ, ನನ್ನ ಅಹಿಂಸೆ ಇನ್ನೂ ಅಪೂರ್ಣ. ಅಂತೇ, ಕೊಲೆ ಮುಂತಾದ ಹಿಂಸೆಗಳ ವಿಷಯದಲ್ಲಿ ನನಗಿನ್ನೂ ಔಷಧ ಸಿಕ್ಕಿಲ್ಲ. ಪತಿತರನ್ನು ಪತಿತರೆಂದು ತಿಳಿದರೆ ಅದು ಸತ್ಯ.

ಅಹಿಂಸೆಯಿಲ್ಲದೆ ಗಳಿಸಿದ ಅಧಿಕಾರದಲ್ಲಿ ದರಿದ್ರನಾರಾಯಣನ ಸ್ವರಾಜ್ಯ ಇರಲಾರದು. ಸ್ವರಾಜ್ಯ ಸಾಧನೆ ಎಷ್ಟೆಷ್ಟು ಮಟ್ಟಿಗೆ ಅಹಿಂಸೆಯಿಂದ ಆಗುತ್ತದೆಯೋ ಅಷ್ಟಷ್ಟು ಮಟ್ಟಿಗೆ ಬಡವರ ಬಡತನ ಕಳೆದೀತು. ಪೂರ್ಣ ಅಹಿಂಸೆ ನನ್ನಲ್ಲೂ ಇಲ್ಲ. ನಿನ್ನಲ್ಲೂ ಇಲ್ಲ, ಯಾರಲ್ಲೂ ಇಲ್ಲ. ಅಹಿಂಸೆಯನ್ನು ನಡಸುವವರ ಅಹಿಂಸಾವೃತ್ತಿ ದಿನೇ ದಿನೇ ಬೆಳೆದೀತು. ಅದರಿಂದ ಅವರ ಸೇವಾಕ್ಷೇತ್ರವೂ ವಿಸ್ತಾರವಾದೀತು. ಹಿಂಸೆಯ ಪೂಜಾರಿಗಳ ಕ್ಷೇತ್ರ ಕುಗ್ಗೀತು; ಕಡೆಗೆ ಅವರಮಟ್ಟಿಗೇ ಉಳಿದೀತು.

ವರ್ಧಾ, ೧೦–೯–೩೫

**ಬಾಪೂನ ಆಶೀರ್ವಾದ.**

**೮೩**

ಇಂದು ನಿನಗೆ ಕಾಗದ ಬರೆಯಲೇಬೇಕು. ಹರಿಜನಕ್ಕೆ ಬರೆಯಲು ಮಾತ್ರ ಸೋಮವಾರ ಬಲಗೈ ಉಪಯೋಗ ಮಾಡುತ್ತೇನೆ. ಮಿಕ್ಕ ದಿನದಲ್ಲಿ ಎಡಗೈಯಿಂದಲೇ ಬರೆಯುತ್ತೇನೆ. ಇದರಿಂದ ಹೊತ್ತು ಹೆಚ್ಚು ಹಿಡಿಯುತ್ತದೆ. ಅದರಲ್ಲೂ ನಿನ್ನ ಕಾಗದಕ್ಕೆ ಬದಲು ಕೂಡಲೇ ಬರೆಯ ಬೇಕು. ೧೬ ರ ಹೊತ್ತಿಗೆ ಬಾ. ಬಂದೇ ಬಿಡು. ಆಗಿಷ್ಟು ಈಗಿಷ್ಟು, ಅಂತೂ ನಿನಗೆ ಸಾಕಷ್ಟು ವೇಳೆ ಕೊಡುತ್ತೇನೆ. ತಿರುಗಾಡಲು ಹೋಗು ವಾಗ ಸಮಯ ಕೊಟ್ಟರೆ ಆದೀತೇನು? ಇಷ್ಟೇ ದಿನ ಇಲ್ಲಿರುವುದು ಎಂದು ನಿಶ್ಚಯ ಮಾಡದೆ ಬಂದರೆ ಒಳಿತು; ಎರಡು ದಿನ ಹೆಚ್ಚಾದರೆ ಆಗಲಿ. ವಿರಾಮವಾಗಿ ಇಲ್ಲಿ ನಡೆದ ಕೆಲಸವನ್ನೆಲ್ಲ ನೋಡಿ, ಸಮಯ ದೊರೆತ ಹಾಗೆ ನಮ್ಮ ಮಾತೂ ಮುಗಿಸೋಣ.

ನಿನ್ನ ಪ್ರೇರೇಪಣೆಯಿಂದ ಹಿಟ್ಲರನ ಪುಸ್ತಕ ಓದುತ್ತಿದ್ದೇನೆ. Maxtar ಬರೆದ 'ಲೆನಿನ್' ಕೂಡ ಓದಿದೆ. ಹಿಟ್ಲರನ ಬಗ್ಗೆ ಇನ್ನೊಂದು ಪುಸ್ತಕ ತರಿಸಿಟ್ಟಿದ್ದೇನೆ.

ಗುಡಿಸಲಿನ ವರ್ಣನೆ ಬಹಳ ಆಕರ್ಷಕವಾಗಿದೆ. ನಿನ್ನನ್ನು ನೋಡಿ ಕರುಬಲು ಎಷ್ಟೋ ಕಾರಣ ಇವೆ.

ಕಫಕ್ಷಯ (ರಕ್ತಪಿತ್ತ)ವಾದವರನ್ನು ನಪುಂಸಕರಾಗಿ ಮಾಡ ಬೇಕೆಂಬುದನ್ನು ಒಪ್ಪಲು ಬಹಳ ತೊಂದರೆಯಿದೆ. ಅದರಿಂದ ಎಷ್ಟೋ ಅನರ್ಥವಾದೀತು. ಯಾವ ರೋಗವನ್ನೂ ಅಸಾಧ್ಯವೆಂದು ತಿಳಿಯು ವುದು ಸರಿಯಲ್ಲ. ಸಂಯಮ ಬೆಳೆಸಿ ಅದರಿಂದ ದೊರೆತಷ್ಟು ಲಾಭ ದಿಂದ ತೃಪ್ತರಾಗುವುದು ರಾಜಮಾರ್ಗ. ಅಡಿಗಡಿಗೂ ನನಗೆ ಹೇಡಿ ತನದ ವಾಸನೆ ಬರುತ್ತಿದೆ. ನೂಲುವಾಗ ದಾರದಲ್ಲಿ ಗಂಟು ಬಂದರೆ ಹೇಡಿ ಅದನ್ನು ಬಿಡಿಸುವಗೊಡವೆಗೆ ಹೋಗದೆ ಕತ್ತರಿಸುತ್ತಾನೆ. ಕುಶಲ ನಾದವ ಕೌಶಲ್ಯದಿಂದ ಪ್ರಯತ್ನ ಪೂರ್ವಕವಾಗಿ ಆ ಗಂಟು ಬಿಡಿಸು ತ್ತಾನೆ; ಆ ನೂಲನ್ನು ಅವಿಚ್ಛಿನ್ನವಾಗಿ ಇಡುತ್ತಾನೆ. ಅದರಂತೆಯೆ ಅಸಾಧ್ಯವೆನಿಸಿಕೊಂಡ ರೋಗ ಬಂದ ಮನುಷ್ಯನ ವಿಷಯವಾಗಿಯೂ ಅಹಿಂಸಕ ಏನಾದರೊಂದು ಉಪಾಯ ಹುಡುಕುತ್ತಾನೆ.

ಪರದೇಶದಲ್ಲಿ ನಾವು ನಡಿಸಿದ ಅಲ್ಪಪ್ರಚಾರ ರೇಲಿನೊಡನೆ ಎತ್ತಿನ ಗಾಡಿಯ ಸ್ಪರ್ಧೆಯಿದ್ದಂತೆ. ಪ್ರಚಾರಕ್ಕೆ ನಾವು ೧೦೦೦ ರೂಪಾಯಿ ವೆಚ್ಚ ಮಾಡಿದರೆ ೧ ಕೋಟಿ ವೆಚ್ಚ ಮಾಡುವ ಸಾಮರ್ಥ್ಯವಿದೆ ನಮ್ಮ ಪ್ರತಿಪಕ್ಷಿಗೆ ಆದ್ದರಿಂದ ತಾನಾಗಿಯೆ ನಡೆವ ಪ್ರಚಾರದಿಂದ ತೃಪ್ತರಾಗುವುದು ಉಚಿತ.

ವರ್ಧಾ, ೨೪-೯-೩೫

ಬಾಪೂನ ಆಶೀರ್ವಾದ.

## ೮೪

೮ನೆ ತಾರೀಖಿಗೆ ನಂದೀದುರ್ಗಕ್ಕೆ ಹೋಗುತ್ತೇನೆ.

ನಿನಗೆ ಒಳ್ಳೊಳ್ಳೆ ಅನುಭವ ಬರುತ್ತಿವೆ ಎಂದು ಹೇಳಬೇಕು. ಕಾಂಗ್ರೆಸಿನ ಪ್ರವೇಶ ಪತ್ರಿಕೆಯ ಮೇಲೆ ಸಹಿ ಮಾಡಿಸುವಾಗ ಅನುಮಾನ ಬಂತೆಂದು ಅವರಿಗೆ ಅಡ್ಡಿ ಮಾಡಲು ಬಾರದು. ಏನಾದರೂ ನೆವ ಮಾಡಿ ಜನ ಕಾಂಗ್ರೆಸಿನೊಳಗೆ ಬಂದೇ ಬರುತ್ತಾರೆ. ಚಲೋ ಜನ ಹೆಚ್ಚಾಗಿ ಬಂದರೆ ಎಲ್ಲವೂ ಕ್ಷೇಮ.

'ಮಹಾರಾಷ್ಟ್ರೀಯ' ನು ಬರೆದದ್ದು ನಿಜ. ಅವನ ವಿಚಾರ ಸರಣಿ ಮಾತ್ರ ತಪ್ಪು. ಹುಡುಗಿಯರ ಹೆಗಲ ಮೇಲೆ ಕೈಯಿಟ್ಟು ನನ್ನ ವಿಷಯವೃತ್ತಿ ಬೆಳೆಸುತ್ತಿದೇನೆ ಎಂದು ಅದಕ್ಕರ್ಥವಾಗುತ್ತದೆ. ಆದರೆ ಅವನು ಹೇಳಿದ್ದೇ ಬೇರೆ. ಹೆಗಲ ಮೇಲೆ ಕೈ ಹಾಕುವುದನ್ನು ನಿಲ್ಲಿಸಿದರೆ ನನ್ನ ವಿಷಯವೃತ್ತಿ ನಿಂತೀತೇ? ಅದಕ್ಕೂ ಇದಕ್ಕೂ ಸಂಬಂಧವಿಲ್ಲ. ಸುಮ್ಮನೆ ಉಂಡುಂಡು ಮಲಗಿದರೆ ಅದು ಬೆಳೆಯುತ್ತದೆ. ನನಗೆ ಸ್ಖಲನವಾದಾಗ ನಾನು ಎಚ್ಚರವಾಗಿಯೆ ಇದ್ದೆ. ನನ್ನ ಮನಸ್ಸೂ ನನ್ನ ಸ್ವಾಧೀನದಲ್ಲೇ ಇತ್ತು. ಅದರ ಕಾರಣ ತಿಳಿದ ಕೂಡಲೆ ಡಾಕ್ಟರರು ಹೇಳಿದ್ದ ವಿಶ್ರಾಂತಿಯನ್ನು ಬಿಟ್ಟು ಬಿಟ್ಟೆ. ಮೊದಲಿಗಿಂತ ಈಗ ನನ್ನ ಆರೋಗ್ಯ ಚೆನ್ನಾಗಿದೆಯೆಂದು ತಿಳಿ. ಹೌದು. ಈ ಬಗ್ಗೆ ಇನ್ನೂ ಏನಾದರೂ ಬೇಕಿದ್ದರೆ ಕೇಳು. ನಿನ್ನಿಂದ ನನಗೆ ಎಷ್ಟೋ ಕೆಲಸವಾಗಬೇಕಿದೆ. ನನ್ನ ವಿಷಯವಾಗಿ ನನ್ನನ್ನು ಕೇಳಿ ತಿಳಿದುಕೊಳ್ಳುವ ಮಾತೇನಾದರೂ

ಇದ್ದರೆ ಕೇಳು. ಇತ್ತೀಚೆಗೆ ನಾನು ಬರೆದ ಲೇಖನ ಬಹಳ ವಿಚಾರ ಯೋಗ್ಯವಾಗಿದೆ. ನಿನಗದು ತಿಳಿದರೆ ಬ್ರಹ್ಮಚರ್ಯದ ಹಾದಿ ಸುಲಭ ವಾದೀತು. ಜನನೇಂದ್ರಿಯವು ವಿಷಯೋಪಭೋಗಕ್ಕಾಗಿ ಅಲ್ಲವೇ ಅಲ್ಲ. ಈ ಮಾತು ಸ್ಪಷ್ಟವಾಗಿ ತಿಳಿದರೆ ಇಡೀ ದೃಷ್ಟಿಯೇ ಬದಲಾಗು ಗುತ್ತದೆ. ರತ್ನವೆಂದು ಭ್ರಾಂತಿಯಿಂದ ಕೈಗೆ ತೆಗೆದುಕೊಂಡದ್ದು ರತ್ನ ವಲ್ಲ ಕ್ಷಯರೋಗಿ ಉಗುಳಿದ ರಕ್ತಖಂಡವೆಂದು ತಿಳಿದಾಗ ಶಾಂತರಾಗ ಬೇಕು. ಜನನೇಂದ್ರಿಯದ ಉಪಯೋಗದ ವಿಷಯದಲ್ಲಿಯೂ ಹೀಗೆಯೇ. ಹಿಂದೆ ಎಂದೂ ಈ ಮಾತು ಸ್ಪಷ್ಟವಾಗಿರಲಿಲ್ಲ. ದೃಢವಾಗಿಯೂ ಇರ ಲಿಲ್ಲ. ಈಗಿನ ಶಿಕ್ಷಣವಂತೂ ಇದಕ್ಕೆ ಪೂರಾ ವಿರೋಧಿ. ಹೀಗಿದೆ ಪರಿಸ್ಥಿತಿ. ಮಿತಭೋಗವು ಸದ್ಗುಣ; ಅದು ಅಗತ್ಯ ಎಂದು ಹೊಸ ಶಿಕ್ಷಣ ಕಲಿಸುತ್ತದೆ. ನೀನು ಕಳಿಸಿದ ಭಗಿನಿಯರ ಅನುಭವದ ಸಂಗತಿ ಸೊಗ ಸಾಗಿದೆ.

೬–೫–೩೬

**ಬಾಪೂನ ಆಶೀರ್ವಾದ.**

**೮೫**

ನಂದೀದುರ್ಗದಲ್ಲಿ ಪತ್ರವ್ಯವಹಾರ ಆಯಾ ದಿನವೇ ಮುಗಿದು ಹೋಗುತ್ತದೆ. ೧೮ನೆ ತಾರೀಖಿನ ನಿನ್ನ ಕಾಗದ ನಿನ್ನೆ ಸಂಜೆಗೆ ಓದಿದೆ. ಇಂದು ಉತ್ತರ ಬರೆಯುತ್ತಿದ್ದೇನೆ.

ನಿನ್ನ ಪ್ರಶ್ನೆ ಸರಿ. ಇನ್ನೂ ಸ್ಪಷ್ಟವಾಗಿ ಕೇಳಬಹುದಲ್ಲ. ನನಗೆ ಆಗಾಗ ಸ್ಖಲನವಾಗುತ್ತ ಬಂದಿದೆ. ದಕ್ಷಿಣ ಆಫ್ರಿಕಾದಲ್ಲಿ ಒಂದೊಂದು ವರ್ಷ ಅಂತರವಿರುತ್ತಿತ್ತು. ಅಷ್ಟು ಸರಿಯಾಗಿ ನೆನಪಿಲ್ಲ. ಇಲ್ಲಿ ಕೆಲವು ತಿಂಗಳ ಅಂತರ. ಸ್ಖಲನವಾದ ಸಂಗತಿ ಮೂರು ನಾಲ್ಕು ಲೇಖನದಲ್ಲಿ ಹೇಳಿದೇನೆ. ನನ್ನದು ಸ್ಖಲನರಹಿತ ಬ್ರಹ್ಮಚರ್ಯವಾಗಿದ್ದರೆ ಇನ್ನೂ ಎಷ್ಟೋ ಹೆಚ್ಚು ವಿಷಯವನ್ನು ಜಗತ್ತಿನ ಕಣ್ಣೆದುರಿಗೆ ಇಡಬಹುದಾ ಗಿತ್ತು. ೧೫ನೆಯ ವಯಸ್ಸಿನಿಂದ ೩೦ರ ವರೆಗೆ ದಾಂಪತ್ಯಭೋಗ ಅನು ಭವಿಸಿದವನಿಗೆ ವೀರ್ಯವನ್ನು ಸಂಪೂರ್ಣವಾಗಿ ಅವರೋಧ ಮಾಡಲು

ಸಾಧ್ಯವೆ? ಸಂಗ್ರಹಾಕ ಶಕ್ತಿಯನ್ನು ೧೫ ವರ್ಷ ಕಾಲ ಕಳೆದುಕೊ
ವನಿಗೆ ಒಂದೇ ಸಲಕ್ಕೆ ಆ ಶಕ್ತಿ ದೊರೆಯಲಾರದು. ಅವನ ಮನಸ
ಶರೀರ–ಎರಡೂ ದುರ್ಬಲವಾಗಿವೆ. ಅಂತೇ, ನನ್ನದು ಅತ್ಯಂತ ಅಪೂ
ಬ್ರಹ್ಮಚರ್ಯ ಎಂದು ನಾನು ಬಲ್ಲೆ. ಗಿಡದ ಹೆಸರೇ ಇಲ್ಲದ ನೆಲ
ಔಡಲಗಿಡವೇ ಮಹಾವೃಕ್ಷವಾದಂತೆ ನನ್ನ ಸ್ಥಿತಿ. ನನ್ನ ಅಪೂಣ
ಪ್ರಪಂಚಕ್ಕೆ ಗೊತ್ತಿದೆ.

ಮುಂಬಯಿಯಲ್ಲಿದ್ದಾಗ ನನಗೆ ಬಹಳ ದುಃಖವುಂಟುಮಾ
ಅನುಭವ ವಿಚಿತ್ರವಾಗಿದೆ. ಮೊದಲು ಕನಸಿನಲ್ಲಿ ನನಗೆ ಸ್ಖಲನವಾ
ತ್ತಿತ್ತು. ಆದರಿಂದ ನನಗೆ ದುಃಖವಾಗುತ್ತಿರಲಿಲ್ಲ. ಅದನ್ನು ನಾ
ಮರೆತೂ ಬಿಡುತ್ತಿದ್ದೆ. ಆದರೆ ಮುಂಬಯಿಯಲ್ಲಾದದ್ದು ಜಾಗ್ರ
ಸ್ಥಿತಿಯ ಅನುಭವ. ಒಮ್ಮೆಂದೊಮ್ಮೆಗೆ ಸ್ತ್ರೀ ಸಂಗದ ಇಚ್ಛೆ ನನ
ಉಂಟಾಯಿತು. ಈ ಇಚ್ಛೆಯನ್ನು ಪೂರ್ತಿಮಾಡುವ ವೃತ್ತಿ ನನ್ನಲ್ಲಿ
ಲಿಲ್ಲ. ಮೂಢತೆ ಕೊಂಚವೂ ಇರಲಿಲ್ಲ. ಶರೀರ ಪೂರ್ಣ ಸ್ವಾಧೀನ
ಲ್ಲಿತ್ತು. ನಿಗ್ರಹ ಪ್ರಯತ್ನ ಮಾಡುತ್ತಿದ್ದರೂ ಇಂದ್ರಿಯ ಜಾಗ್ರತವಾ
ಗುತ್ತಿತ್ತು. ಈ ಅನುಭವ ಹೊಸತು; ಅಯೋಗ್ಯವಾದದ್ದು. ಅದ
ಕಾರಣ ನಿನಗೆ ಹೇಳಿಯೇ ಇದ್ದೇನೆ. ಕಾರಣ ನಾಶವಾದೊಡನೆ ಇಂದ್ರಿಯ
ಜಾಗೃತಿ ನಿಂತಿತು.

ನನ್ನಲ್ಲಿ ಅಪೂರ್ಣತೆಯಿದ್ದರೂ ಒಂದು ಮಾತು ಮಾತ್ರ ನನ
ಸುಸಾಧ್ಯ. ನನ್ನ ಬಳಿ ಸಾವಿರಾರು ಜನ ಹೆಂಗಸರು ಸುರಕ್ಷಿತರಾ
ದಾರೆ. ಕೆಲವರು ಹೆಂಗಸರಿಗೆ ವಿಷಯವಾಸನೆ ಉಂಟಾದಾಗ ಕೂ
ದೇವರು ಅವರನ್ನೂ ನನ್ನನ್ನೂ ಕಾಪಾಡಿದಾನೆ. ಇಂಥವು ಎಷ್ಟೋ
ಪ್ರಸಂಗ. ಇದು ನೂರಕ್ಕೆ ನೂರುಪಾಲು ದೇವರ ಕೃಪೆಯಿಂದ
ನಾನು ತಿಳಿದಿದೇನೆ. ಯತ್ಕಿಂಚಿತ್ತೂ ಇದರಲ್ಲಿ ನನಗೆ ಅಭಿಮಾನವಿಲ್ಲ
ಸಾಯುವತನಕ ನನ್ನ ಸ್ಥಿತಿ ಹೀಗೆ ಇರಲಿ ಎಂದು ದಿನವೂ ದೇವರನ್ನು
ಪ್ರಾರ್ಥಿಸುತ್ತೇನೆ. ಶುಕದೇವನಂತೆ ಆಗುವುದೇ ನನ್ನ ಗುರಿ. ಅದ
ನನಗಿನ್ನೂ ಸಾಧ್ಯವಾಗಿಲ್ಲ. ಈ ಸ್ಥಿತಿ ಪ್ರಾಪ್ತವಾದರೆ ವೀರ್ಯವಂತನ
ದರೂ ನಪುಂಸಕನಾದೇನು; ಸ್ಖಲನವಂತೂ ಅಸಂಭವವೇ ಆದೀತು.

ಬ್ರಹ್ಮಚರ್ಯದ ವಿಷಯವಾಗಿ ಈಗ ನಾನು ಹೇಳುತ್ತಿರುವುದರಲ್ಲಿ ಯಾವ ಕುಂದೂ ಇಲ್ಲ. ಅತಿಶಯೋಕ್ತಿಯೂ ಇಲ್ಲ. ಪ್ರಯತ್ನ ಮಾಡಿದರೆ ಯಾವ ಗಂಡಸಾದರೂ ಹೆಂಗಸಾದರೂ ಈ ಗುರಿಯನ್ನು ಮುಟ್ಟಬಹುದು. ನಾನು ಬದುಕಿರುವುದರೊಳಗಾಗಿಯೇ ಜನ ಈ ಗುರಿಯನ್ನು ಮುಟ್ಟಬಹುದೆಂದು ಇದರರ್ಥವಲ್ಲ. ಅದಕ್ಕೆ ಸಾವಿರಾರು ವರ್ಷ ಹಿಡಿದೀತು; ಆದರೆ ಅದು ಮಾತ್ರ ಸತ್ಯ, ಸಾಧ್ಯ; ಸಿದ್ಧವಾಗಲೇಬೇಕು. ಮನುಷ್ಯ ಇನ್ನೂ ಬಹಳ ದೂರ ನಡೆಯಬೇಕಾಗಿದೆ. ಅವನ ಪಶುವೃತ್ತಿ ಇನ್ನೂ ಹೋಗಿಲ್ಲ. ಆಕಾರದಲ್ಲಿ ಮಾತ್ರ ಮಾನವ. ಎಲ್ಲ ಕಡೆಯಲ್ಲಿಯೂ ಹಿಂಸಾರಾಜ್ಯ. ಪ್ರಪಂಚದ ತುಂಬಾ ಅಸತ್ಯ ತುಂಬಿದೆ. ಆದರೂ ಸತ್ಯ ಅಹಿಂಸೆಗಳ ವಿಷಯದಲ್ಲಿ ಹೇಗೋ ಹಾಗೆ ಬ್ರಹ್ಮಚರ್ಯದ ವಿಷಯದಲ್ಲಿಯೂ ನಿಸ್ಸಂಶಯ.

ಪ್ರಯತ್ನ ಮಾಡುವಾಗ ಸುಟ್ಟುಕೊಳ್ಳುವವರ ಪ್ರಯತ್ನ ವ್ಯರ್ಥ. ಮನಸಿನಲ್ಲಿ ವಿಕಾರತುಂಬಿಕೊಂಡಿದ್ದರೂ ಸ್ಖಲನವಾಗಬಾರದೆಂದು ಅವರ ಆಸೆ. ಸ್ತ್ರೀ ಸಂಗ ಅಪರಿಗಿಷ್ಟವಲ್ಲ. ಇಂಥವರು ಮಿಥ್ಯಾಚಾರಿಗಳು. ಗೀತೆಯ ತಿನೆಯ ಅಧ್ಯಾಯ ಅವರಿಗೆ ಅನ್ವಯಿಸುತ್ತದೆ. ನಾನೀಗ ಮಾಡುತ್ತಿರುವುದು ವಿಚಾರ ಶುದ್ಧಿ. ಬ್ರಹ್ಮಚರ್ಯವು ಅಧರ್ಮ ಎಂದು ತಿಳಿಯುವುದು ಆಧುನಿಕ ವಿಚಾರ. ಕೃತ್ರಿಮೋಪಾಯದಿಂದ ಸಂತಾನ ನಿರೋಧ ಮಾಡಿ ವಿಷಯವಾಸನೆಯನ್ನು ತೃಪ್ತಿಗೊಳಿಸುವುದೇ ಅದರ ದಾರಿ. ನನ್ನ ಇಡೀ ಆತ್ಮವೇ ಇದನ್ನು ಪ್ರತಿಭಟಿಸುತ್ತದೆ. ವಿಷಯಾಸಕ್ತಿ ಮೊದಲಿನಿಂದಲೂ ಇದೆ. ಆದರೆ ಪ್ರಪಂಚದಲ್ಲಿ ಬ್ರಹ್ಮಚರ್ಯಕ್ಕೆ ಶ್ರೇಷ್ಠತೆಯಿದೆ; ಮುಂದೆಯೂ ಇರುತ್ತದೆ.

ನಂದೀದುರ್ಗ, ೨೧-೫-೩೬

**ಬಾಪೂನ ಆಶೀರ್ವಾದ.**

**೮೬**

ಹಿಟ್ಟು, ಅಕ್ಕಿ, ಎಣ್ಣೆ-ಇತ್ಯಾದಿಗಳ ವಿಷಯ ತಪ್ಪದೆ ಪ್ರಚಾರ ಮಾಡುತ್ತಿರು. ಈ ಪದಾರ್ಥಗಳು ತುಟ್ಟಿಯಾದರೂ ಅಗ್ಗವೆಂದೇ

ತಿಳಿಯಬೇಕು. ನಾವು ಹೊಸದೊಂದು ಅರ್ಥಶಾಸ್ತ್ರವನ್ನು ನಿರ್ಮಾಣ ಮಾಡುತ್ತಿದೇವೆ. ಒಂದೊಂದು ದೇಶಕ್ಕೆ ಒಂದೊಂದು ಅರ್ಥಶಾಸ್ತ್ರ. ಅದರಲ್ಲಿ ಬಡವರ ಅರ್ಥಶಾಸ್ತ್ರವೇ ಬೇರೆ, ಶ್ರೀಮಂತರದೇ ಬೇರೆ. ಅಂತೇ ನೀನು ನಿರಾಶಳಾಗಬೇಡ.

ಸಮಾಧಿಸ್ಥಯೋಗಿಯ ಜೀವನದಲ್ಲಿ ನನಗೆ ನಂಬಿಗೆ ಹುಟ್ಟುವ ವರೆಗೆ ಅವನು ನಮ್ಮ ಪಾಲಿಗೆ ಸತ್ತಂತೆ ಎಂದು ಯಾರಾದರೂ ಅವನನ್ನು ಸುಡುತ್ತಾರೆಯೆ? ದೇವರಲ್ಲಿ ನಂಬಿಗೆ ಇನ್ನೂ ಹುಟ್ಟಿಲ್ಲವೆಂದು ನಾವು ನಾಸ್ತಿಕರೆನ್ನಬಹುದೆ? ಯೋಗಿಯನ್ನು ಸುಟ್ಟಂತಾದೀತಲ್ಲ. ಭಾವನೆ, ಶ್ರದ್ಧೆ ಎರಡರಲ್ಲಿ ಭೇದವಿದ್ದರೆ. ಭಾವನೆಯಿರದಿದ್ದರೂ ಶ್ರದ್ಧೆ ಬೆಳಸಿಕೊಳ್ಳಲೆಂದು ಪ್ರಾಮಾಣಿಕತನದಿಂದ ಪ್ರಾರ್ಥನೆ ಮಾಡುವುದರಲ್ಲಿ ಲಾಭವಿದೆ.

ಕಾಡುಜನರ ನಡುವೆ ನಾವಿದ್ದರೆ ಅವರಲ್ಲಿ ನಮ್ಮ ಧರ್ಮವನ್ನು ಪ್ರಚಾರ ಮಾಡುವುದರ ಬದಲು ನೀತಿಧರ್ಮವನ್ನು ಬೆಳೆಸಬೇಕು. ಅವರ ಹೃದಯದ್ವಾರ ತೆರೆದಾಗ ತಮಗೆ ಬೇಕಾದ ಧರ್ಮವನ್ನೂ ತಾವೇ ಆರಿಸಿಕೊಂಡಾರು. ಸರ್ವಧರ್ಮಗಳ ಸಾಮಾನ್ಯಜ್ಞಾನವನ್ನು ಅವರಿಗೆ ಮಾಡಿಕೊಡಬೇಕು.

ಸೇಗಾಂವ, ವರ್ಧಾ, ೨೪-೬--೩೬

ಬಾಪೂನ ಆಶೀರ್ವಾದ.

೮೭

ನೀನು ಕಳಿಸಿದ ರಾಖೀ ದೊರೆಯಲಿಲ್ಲ. ದೊರೆತಿದ್ದರೆ ಕಟ್ಟಿಕೊಳ್ಳುತ್ತಿದ್ದೆ. ನೀನು ಕಳಿಸಿದೆ; ಅದರ ಪುಣ್ಯವೋ ಸುಖವೋ ನಿನಗೆ ಸಿಗಬೇಕು.

'ಸೇಗಾಂವ ಅನುಭವ' ಎಂಬ ಲೇಖನ ಹರಿಜನದಲ್ಲಿ ಬರೆದೆ, ಓದಿನೋಡು. ಇನ್ನೂ ಪೂರ್ಣವಾಗಿ ಮಾಡಬಹುದಿತ್ತು. ಸಾಕಷ್ಟು ವೇಳೆಯೂ ಇಲ್ಲ, ಇಷ್ಟವೂ ಇಲ್ಲ. ಮೇಲಾಗಿ ಅವು ಯಾರಿಗೂ ಹೇಳುವಂಥ ಅನುಭವಗಳಲ್ಲ ಎನಿಸುತ್ತದೆ.

ಬಳಕೆಯ ಭಾಷೆಗೆ ರೂಢಾರ್ಥವೊಂದಿದ್ದರೂ ಬಳಸುವವನ ಅರ್ಥವೂ ಒಂದಿರುತ್ತದೆ. ಹಿಂದುಮುಂದಿನ ಸಂದರ್ಭದಿಂದ ನಾವು

ಆ ಅರ್ಥವನ್ನು ತಿಳಿದುಕೊಳ್ಳಬಹುದು. ಸಂಪೂರ್ಣವಾಗಿ ಸತ್ಯವನ್ನು ಕಂಡವರು ಯಾರು? ಆದರೂ ತಾವು ಕಂಡದ್ದನ್ನೂ ಕಂಡಂತೆಯೆ ಹೇಳಿದರೆ ಅವರ ಪಾಲಿಗೆ ಅದೇ ಸತ್ಯ ಎನ್ನಬೇಕು. ಅದು ಸುಳ್ಳಿದ್ದರೂ ಇರಲಿ. ಯುಗಯುಗಕ್ಕೂ ವಿಚಾರ ಬದಲಾಗುತ್ತಲೇ ಇದೆ. ಆಯಾ ಯುಗಕ್ಕೆ ಆ ವಿಚಾರ ಸತ್ಯ ಎನ್ನಬೇಕು. ಇದೇ ವಿಚಾರವೇ 'ಅಸತೋಮಾ ಸದ್ಗಮಯ'ದಲ್ಲಿ ಅಡಕವಾಗಿದೆ.

ಉಚ್ಚನೀಚ ಭಾವ ಮಾಯವಾದ ಸ್ಥಳದಲ್ಲಿ ಬೇಕಾದರೆ ಶೂದ್ರ ಉಳಿದವರ ಸೇವೆ ಮಾಡಲಿ. ಶೂದ್ರತ್ವಕ್ಕೆ ಪರಿಚರ್ಯಧರ್ಮ ಕಾರಣ ವಾದರೆ ಅದನ್ನು ಬದಲಿಸಬೇಕಾಗಿಲ್ಲ. ಬ್ರಾಹ್ಮಣ, ಭಂಗೀ ಇಬ್ಬರೂ ಉದರಂಭರಣವನ್ನೇ ಮಾಡುತ್ತಿದ್ದರೆ ಇಬ್ಬರಲ್ಲಿ ಏನು ಭೇದ? ಜ್ಞಾನಿ ಯಾಗಲು ಹೊಲೆಯನಿಗೇನು ಅಡ್ಡಿ? ನಾನು ಕಲ್ಪಿಸಿಕೊಂಡ ಜಾತಿಗಳಲ್ಲಿ ಯಾರಿಗೂ ಜ್ಞಾನದ ಗುತ್ತಿಗೆ ಇಲ್ಲ. ಸ್ತ್ರೀಯರಿಗಾಗಿರುವ ಪ್ರಾರ್ಥನಾ ಶ್ಲೋಕಗಳನ್ನು ನೋಡು. ಅದರಲ್ಲಿ ನಾಲ್ಕೂ ವರ್ಣಗಳ ಸಾಮಾನ್ಯ ಧರ್ಮವೇನು? ಜ್ಞಾನದೇವಾದಿಗಳ ವಚನದಲ್ಲಿ ಕೀಳು ಮೇಲು ಭಾವದವು ಸಿಕ್ಕಾವು. ಅಂಥ ನಾಲ್ಕೈದರಿಂದಲೇ ಅವರ ಬಗ್ಗೆ ನಾವು ನಿರ್ಧರಮಾಡಬಹುದೇ? ರಾಮದಾಸರ ವಿಷಯ ನೀನು ಹೇಳುತ್ತಿರು ವುದು. ಇಂಥ ಉದಾಹರಣೆ ಅಯೋಗ್ಯವಾದರೂ ನನ್ನ ವಾದಕ್ಕೇನು ಭಂಗವಿಲ್ಲ. (ನವೀನ ಯುಗಧರ್ಮ ಪ್ರತಿಷ್ಠಾಪನೆಯ) ನಿನ್ನ ಬಿನ್ನಹ ಮನ್ನಣೆಗೆ ಯೋಗ್ಯವಲ್ಲ. ನೀನು ಪಾತ್ರಾಪಾತ್ರ ವಿಚಾರ ಮಾಡಿಲ್ಲ. ನದಿಯ ನೆಗಸಿನಲ್ಲಿ ತೇಲಿ ಹೋಗಿದ್ದೀ. ನಾನೂ ನೀನೂ ನಮ್ಮ ತಂದೆ ತಾಯಿಗಳ ಗೆರೆದಾಟಿಲ್ಲ. ಹೊಸತನವನ್ನು ಹಿಡಿಯುವುದರಲ್ಲಿ ಇದ್ದಷ್ಟೇ ಅರ್ಥ-ಅನರ್ಥ ಹಳೆಯ ಗೆರೆಯನ್ನೂ ದಾಟುವುದರಲ್ಲೂ ಇದೆ. ಇದ್ದಲ್ಲೇ ಎಷ್ಟೋ ಬದಲಾವಣೆ ಮಾಡಬಹುದು. ಅದನ್ನೇ ಉನ್ನತಿ-ಪ್ರಗತಿ ಎನ್ನುವುದು. ತೀರ ಹೊಸದಾಗಿ ಕಾಣುವುದೆಂದರೆ ಉಲ್ಕಾಪಾತ. ಹಿಂದೂ ಧರ್ಮಕ್ಕೆ ಯಾವುದಾದರೂ ಒಂದು ಗೆರೆ ಇದ್ದೀತೋ ಇಲ್ಲೋ? ಮಕ್ಕಳು ನೀರಿನಲ್ಲಿ ಹೊಸ ಹೊಸ ಅಕ್ಷರಗಳನ್ನು ದಿನವೂ ತೆಗೆಯುತ್ತಾರೆ.

ಮುಗಿಸುವುದರೊಳಗೆ ಅವು ಮಾಯವಾಗುತ್ತಿವೆ. ಅವರಿಗೇನೋ ಅದೊಂದು ಆಟ. ನೀನು ಹಾಗೆ ಆಟವಾಡಬೇಕೆನ್ನುತ್ತೀಯೇನು? ೬೫ ವರ್ಷದಿಂದ ಹಳೆಯ ಗೆರೆಯೊಳಗೆ ಕೂತು ಬರೆದ ನನ್ನನ್ನು ನೀರಿನಲ್ಲಿ ಬರೆಯಲು ಕರೆಯುತ್ತೀಯಾ? ಅದು ಹೇಗೆ ಸಾಧ್ಯ? ನಾನೇನೋ ದಡದಲ್ಲಿ ನಿಂತು ನೀನೂ ನಿನ್ನಂಥವರೂ ಆಡುವ ಆಟವನ್ನು ನೋಡುತ್ತೇನೆ.

ನನ್ನ ಅಜ್ಞಾನದ ಪಟ್ಟು ಚೆನ್ನಾಗಿ ಹಿಡಿದುಬಿಟ್ಟೆ. ಪರೀಕ್ಷೆ ಮಾಡಿದರೆ ನನ್ನಲ್ಲಿ ಇನ್ನೂ ಎಷ್ಟೋ ಘೋರವಾದ ಅಜ್ಞಾನ ಕಂಡೀತು. ಆದರೆ, ನನ್ನ ಅಜ್ಞಾನವನ್ನು ಕಂಡು ನೀನು ಓಡಿ ಹೋಗಲಿಕ್ಕಿಲ್ಲವಷ್ಟೆ? ಅಭಯ ಕೊಡುವುದಾದರೆ ಹೇಳುತ್ತೇನೆ ನೋಡು, ನನಗೇನೂ ಗೊತ್ತಿಲ್ಲ. ನಾನು ಅದನ್ನೆಲ್ಲ ಓದದಿರುವುದೇ ಅದರ ಕಾರಣ. ನನಗೆ ತಿಳಿಯುವ ಪೂರ್ತಿ ಸಾಮ್ಯವಾದವನ್ನು ಓದಿಕೊಂಡಿದ್ದೇನೆ. ಸ್ವರಾಜ್ಯ ಬಂದಾಗ ಏನು ಬೇಕಾದೀತೋ ಸ್ವರಾಜ್ಯ ಬಂದ ಮೇಲೇ ಹೇಳುತ್ತೇನೆ. ನನ್ನ ವಿರೋಧ ನಿನಗೆ ಕಂಡರೆ, ಅದು ಸತ್ಯ-ಅಸತ್ಯ, ಹಿಂಸೆ-ಅಹಿಂಸೆಗಳ ಅನುಷಂಗವಾಗಿಯೇ ಇದ್ದೀತು.

೧೦-೮-೩೬

ಬಾಪೂನ ಆಶೀರ್ವಾದ

೮೮

ಒಳ್ಳೇ ಪರೀಕ್ಷೆಗೆ ಗುರಿಯಾಗಿದ್ದೀ ನೀನು! ಹಳ್ಳಿಗರ ಕೈಗೆ ನಾಲ್ಕು ಕಾಸು ಸಿಗುವಂತೆ ಮಾಡುವುದು ಕಠಿನವಿದ್ದಷ್ಟೇ ಸುಲಭ. ಅವರು ನಮ್ಮ ಮಾತು ಕೇಳಿದರೆ ಬಂಡವಾಳ ಏನೂ ಇಲ್ಲದೆ, ಅಥವಾ ಸ್ವಲ್ಪ ಬಂಡವಾಳದಿಂದ ಹಳ್ಳಿಗಳ ವರಮಾನವನ್ನು ದುಪ್ಪಟ್ಟು ಮಾಡಬಹುದು. ಹಳ್ಳಿಗರನ್ನು ಹಿಂಡುವವರ ಪ್ರಾಪ್ತಿಯನ್ನು ನಾನು ಲೆಕ್ಕ ಹಿಡಿದಿಲ್ಲ. ಇವರು ನಾವು ಹೇಳಿದ ಮಾತು ಕೇಳದೆ, ಕಲಿಸಿದ್ದು ಕಲಿಯದೆ, ಮಾಡೆಂದದ್ದು ಮಾಡದೆ ಇದ್ದರೆ ವರಮಾನ ಬೆಳೆದೀತು ಹೇಗೆ? ಅದು ಅಸಾಧ್ಯ. ಇದಲ್ಲದೆ ಇನ್ನೊಂದು ಕಷ್ಟವಿದೆ. ಹಳ್ಳಿಗೆ ಕೆಲಸ ಮಾಡಲು

ಹೋಗುವವರು ಎಲ್ಲೋ ಒಂದು ಹಿಡಿ ಜನ. ಅವರೂ ಅನುಭವವಿಲ್ಲದವರು. ಹಳ್ಳಿಗಳಲ್ಲಿ ಇರಲು ಬೇಕಾಗುವ ದೇಹದಾರ್ಢ್ಯ ಅವರಲ್ಲಿಲ್ಲ. ಹಳ್ಳಿಯ ಜನರ ಸ್ವಭಾವ ಗೊತ್ತಿಲ್ಲ. ಅವರ ಕೊರತೆಗಳು ಯಾವುವೋ ತಿಳಿಯದು. ಇದರಿಂದ ಅವರ ಕೈಯೂ ಆಡದು, ಬುದ್ಧಿಯೂ ಓಡದು. ವಿದ್ಯಾಲಯದಲ್ಲಿ ಗಳಿಸಿದ ಜ್ಞಾನ ಹಳ್ಳಿಗಳಲ್ಲಿ ಕೆಲಸಕ್ಕೆ ಬಾರದು. ಇಂಥ ಸಂದರ್ಭದಲ್ಲಿ ಬೇಕಾದದ್ದು ಧೈರ್ಯ, ಆತ್ಮವಿಶ್ವಾಸ. ದೇಹಬಲ ಚೆನ್ನಾಗಿದ್ದರೆ ಸರಕಾರದ ನೆರವಿಲ್ಲದೆಯೆ ಹಳ್ಳಿಗಳ ಆರ್ಥಿಕಸ್ಥಿತಿಯನ್ನು ಎಂಟಾಣೆ ಪಾಲು ಉತ್ತಮಗೊಳಿಸಬಹುದು. ಎಂಟಾಣೆಯ ಪಾಲು ಎಂದರೆ ಕಡಮೆ. ಹದಿನೈದಾಣೆಯ ಪಾಲು ಉತ್ತಮಗೊಳಿಸಬಹುದು. ಶರೀರ ಸುಧಾರಣೆ, ಸಮಾಜ ಸುದಾರಣೆ, ನೀತಿ ಸಂಸ್ಕಾರ ಇವೇ ಮುಖ್ಯ. ಇವಕ್ಕೆ ಸರಕಾರದ ನೆರವು ಬೇಕಾಗಿಲ್ಲ. ಆರ್ಥಿಕ ಸುಧಾರಣೆಯಲ್ಲಿ ಸರಕಾರದ ಸಹಾಯ ಸ್ವಲ್ಪ ಮಟ್ಟಿಗೆ ದೊರೆತರೆ ಕೆಲಸ ಹಗುರಾಗುತ್ತದೆ. ಅವು ಮೂರೂ ಇಲ್ಲದಿದ್ದರೆ ಈ ಸಹಾಯ ದೊರೆತರೂ ಏನೂ ಲಾಭವಿಲ್ಲ. ಖಾದೀ ಶಾಸ್ತ್ರದಲ್ಲಿ ನಿಷ್ಣಾತಳಾಗಿ, ಉಳಿದ ಪ್ರಲೋಭನಕ್ಕೊಳಗಾಗದೆ ಹಳ್ಳಿಯಲ್ಲೇ ಸ್ಥಿರವಾಗಿ ನಿಂತರೆ, ನೀನು ಬರೆದದ್ದೆಲ್ಲ ನಿನಗೇ ಪ್ರತ್ಯಕ್ಷಾನುಭವವಾಗೀತು. ಆಕಳ ಹಾಲಿನ ಬಗ್ಗೆ ನೀನು ಹಟತೊಡದಿರುವುದು ಒಳಿತಲ್ಲ. ಪ್ರವಾಸದಲ್ಲೂ ಆಕಳ ತುಪ್ಪ, ಖೇಡೆ ಇಟ್ಟುಕೊಳ್ಳಬಹುದು. ಜೊತೆಗೆ ಬೇಕಾದರೆ ಬೆಲ್ಲವನ್ನು ಕೂಡಿಸಿ ತಿನ್ನಬಹುದು. ಹೀಗೆ ಮಾಡಿದರೆ ಖರ್ಜೂರ ಕಡಮೆ, ಹಾಲೂ ಇದ್ದಂತಾಯಿತು. ಒಣ ಖೇಡೆ ತಿನ್ನುವ ಬದಲು ಅದನ್ನು ಪುಡಿಮಾಡಿ ಬಿಸಿನೀರಿನಲ್ಲಿ ಕಲಿಸಿ ಹಾಲಿನಂತೆ ಮಾಡಿ ಕುಡಿಯಬೇಕು. ಅದರಲ್ಲಿ ಜೀವನಸತ್ವ – ವಿಟಮಿನ್ನು – ಇರುವುದಿಲ್ಲ. ಕೆಲವು ದಿನ ವಿಟಮಿನ್ನು ಸಿಗದಿದ್ದರೆ ನಮಗೇನು ನಷ್ಟವಲ್ಲ.

ಎಲ್ಲರಿಗೂ ಬ್ರಹ್ಮಚರ್ಯ ಸಾಧ್ಯವಲ್ಲ ಎಂಬ ಮಾತು ಎಲ್ಲರಿಗೂ ತಿಳಿಯುವಂಥದು. ಇಂದ್ರಿಯ ನಿಗ್ರಹಮಾಡಲಾರದವರು ಮದುವೆ ಮಾಡಿಕೊಂಡು ಬಿಡಬೇಕು. ಗುಪ್ತವಿಷಯೋಪಭೋಗ ನನಗೆ ಒಪ್ಪಿಗೆಯಿಲ್ಲ. ಇಂಥ ಗುಪ್ತ ವಿಷಯ ಸೇವನೆಯಲ್ಲಿಯೇ ಮನುಷ್ಯನ ಪಾತಿತ್ಯ.

ಹಾಗೆ ಮಾಡುವವನಿಗೆ ಮಿತಿಯಿಲ್ಲ. ಗೃಹಸ್ಥಾಶ್ರಮಿಗಳ ವಿಷಯದ ನನಗೆ ಹಗೆಯಿಲ್ಲ. ಅದೂ ಅವಶ್ಯಕ, ಚೆಲುವು. ಆ ಆಶ್ರಮಗರ್ಭದ ಧರ್ಮವಿದೆ. ಗೃಹಸ್ಥಧರ್ಮ ಸ್ತುತ್ಯವಾದುದು; ಆದರೆ ಸ್ವೇಚ್ಛಾವೃತ್ತಿ ನಿಂದ್ಯ. ನನ್ನ ವಿರೋಧವೆಲ್ಲ ಸ್ವೇಚ್ಛಾವೃತ್ತಿಯ ವಿಷಯವಾಗಿ.

ಬ್ರಹ್ಮಚರ್ಯ ಪಾಲನೆಯಲ್ಲಿ ನಿಜವಾದ ಪಾಲು ಹೆಂಗಸಿನದು. ಬ್ರಹ್ಮಚರ್ಯದ ಅಗತ್ಯ, ಮಹತ್ವವನ್ನು ಸಿದ್ಧಮಾಡುವ ಭಾರವೆಲ್ಲ ಗಂಡಸಿನ ಮೇಲೆಯೆ ಇಲ್ಲ. ಇಂದಿನ ವರೆಗೆ ಗಂಡಸೇ ಹೆಚ್ಚಾಗಿ ಅದನ್ನು ಹೊತ್ತಿದ್ದಾನೆ. ಇದರಿಂದಲೇ ಅದಕ್ಕೆ ಅಧಿಕಾರದ ರೂಪ ಬಂದದ್ದು. ಅದರಿಂದ ಬ್ರಹ್ಮಚರ್ಯವನ್ನು ನಿಂದಿಸಿದಾರೆ, ಹೀಯಾಳಿಸಿದಾರೆ. ಸುಲಭವಾಗಿರಬೇಕಾದ ಈ ಕೆಲಸ ಬಹಳ ಕಷ್ಟವಾಗಿ ಕೂತಿದೆ. ಅನೇಕರಿಗೆ ಅಸಾಧ್ಯವೆನಿಸುವಷ್ಟು ಕಷ್ಟವಾಗಿದೆ. ಗಂಡಸರೇ ಇದಕ್ಕೆ ಹೆಚ್ಚಾಗಿ ಕಾರಣ ಎನಿಸುತ್ತದೆ ನನಗೆ. ಬೇಕುಬೇಕಾದದ್ದೆಲ್ಲ ಮಾಡಿ ಗಂಡಸು ಹೆಂಗಸನ್ನು ಕೆಳಗೆ ತುಳಿದಿದಾನೆ. ಕೆಲವು ಸಲ ಪಶುಬಲ, ಕೆಲವು ಸಲ ಮುಖಸ್ತುತಿ ಎರಡೂ ಮಾಡಿ ಹಾಗೆ ಮಾಡಿದಾನೆ. ಏನೇ ಇರಲಿ. ಅಂತೂ ಮಾನವ ಸಮಾಜದ ಅರ್ಧಭಾಗ ನಿರ್ಬಲವಾಗಿಯೇ ಉಳಿಯಿತು. ಅದರ ಫಲವಾಗಿ ಅನೇಕ ಕೆಲಸಗಳಲ್ಲಿ ಗಂಡಸು ಅಪ್ರಯೋಜಕನಾಗಿದಾನೆ. ಹೀಗೆ ಆದದ್ದೂ ಒಳಿತೇ. ಈಗೀಗ ಹೆಂಗಸರಲ್ಲಿ ಕೊಂಚ ಜಾಗೃತಿಯಾಗಿದೆ. ಆದರೆ, ಅದಕ್ಕೊಂದು ವಿಕೃತಸ್ವರೂಪ ಬರತೊಡಗಿದೆ. ಸ್ವಾತಂತ್ರ್ಯದ ಹೆಸರಿನಲ್ಲಿ ಗಂಡಸು ಹೆಂಗಸನ್ನು ಮುದ್ದಿಸುತ್ತಿದಾನೆ. ಆದರಿಂದ ಅವಳ ಅಹಂಕಾರ ಬೆಳೆಯುತ್ತಿದೆ. ಸ್ವಾತಂತ್ರ್ಯ ಎಂದರೆ ಸ್ವೇಚ್ಛಾಚಾರ ಎಂದು ತಿಳಿದಾಳೆ ಹೆಂಗಸು. ಈ ಸನ್ನಿವೇಶದಿಂದ ಗಂಡು ಹೆಣ್ಣು ಯಾವಾಗ ಮೇಲೇರಿಬಂದಾರೋ ಏನೋ! ನೀನಂತೂ ಹೊರಗೆ ಬಾ.

೫-೨-೩೭

**ಬಾಪೂನ ಆಶೀರ್ವಾದ.**

**೮೯**

ನೀವು ನಾಲ್ವರೂ ಮೊದಲೇ ತಿಳಿಸಿ ಹೊತ್ತು ಗೊತ್ತು ಮಾಡಿಕೊಂಡಿದ್ದರೆ ಚೆನ್ನಾಗಿತ್ತು. ನೀವಿರುವ ಹಳ್ಳಿಯೊಳಗಿನ ಸ್ಥಿತಿಗತಿಯನ್ನು

ಪೂರಾ ತಿಳಿದುಕೊಳ್ಳದೆ ನಾನೇನು ಹೇಳಬಲ್ಲೆ ಎಂದು ನೀವು ಆಕ್ಷೇಪಿಸುವುದು ನನಗೆ ಒಪ್ಪಿಗೆ. ಹಳ್ಳಿಯ ಅನುಭವ ನಿಮಗೆ ಈಗ ತಾನೇ ಪ್ರಾರಂಭ ಎಂಬುದೂ ಸರಿ. ಒಟ್ಟಿನಲ್ಲಿ ನಾವೆಲ್ಲರೂ ಒಂದೇ. ಆದರೂ ನನ್ನ ವಿಚಾರದಲ್ಲಿ ಒಂದು ವೈಶಿಷ್ಟ್ಯವಿದೆ. ಅದರ ಕಾರಣ ನನ್ನ ಅಹಿಂಸೆ, ಅಂತಲೇ, ನನ್ನಿಂದ ನೀವೇನಾದರೂ ತಿಳಿದುಕೊಳ್ಳಬಹುದಾಗಿತ್ತು.

ವಿಚಾರ ಮಾಡುವ ಕಲೆಯನ್ನು ನೀನು ಬೆಳೆಸುತ್ತಿದ್ದೀಯೆ. ಒಳಿತು. ....ಲ್ಲಿ ಮಾಡಿದ ಭಾಷಣದಲ್ಲಿ ನನಗೆ ವಿಚಾರ ಶೂನ್ಯತೆ ಹೆಚ್ಚಾಗಿ ಕಂಡಿತು. ತಲೆಯಿಂದ ಹೊರಟ ಹೊಗೆಯಂತಿತ್ತು ಅದು. ಅಂತಃಕರಣದ ಉದ್ಗಾರದಂತಿರಲಿಲ್ಲ. ಹೇಗಾದರೂ ಬಿಡುವು ಮಾಡಿಕೊಂಡು ನಿನ್ನೊಡನೆ ಮಾತಾಡಿ, ನಿನ್ನ ವಿಚಾರ ಶೂನ್ಯತೆಯನ್ನು ಎರಡೆರಡಲೆ ನಾಲ್ಕು ಎಂಬ ಹಾಗೆ ಪ್ರಮಾಣಿಸಿ ಕೊಡಬೇಕಾಗಿತ್ತು. ನೀನು ಅವಸರದಿಂದ ಹೊರಟುಹೋದೆ. ನನಗೂ ಬಿಡುವಾಗಲಿಲ್ಲ. ನಿನ್ನ ವಿಚಾರ ತಪ್ಪೆಂದು ಪ್ರಮಾಣಿಸಿಕೊಡುವ ಆತುರವೂ ನನಗಿರಲಿಲ್ಲ. ಆದ್ದರಿಂದಲೇ ನಾನು ನಿನ್ನನ್ನು ತಡೆಯಲಿಲ್ಲ. ನಿನ್ನ ಈ ದೋಷ ಎಂದಾದರೂ ನಿನಗೆ ತಿಳಿದೀತು ಎಂದು ನಾನು ನಂಬಿದೇನೆ. ಈಗ ಬರೆದಿರುವ ಕಾಗದದಲ್ಲಿಯೇ ಆ ಮಾತನ್ನು ನೀನು ಒಪ್ಪಿಕೊಂಡಿದ್ದೀ. ಆ ಭಾಷಣದ ವಿಚಾರ ಸರಣಿಯ ದೋಷ ನಿನಗೆ ಕಾಣದಿರಬಹುದು. ವಿಚಾರ ಮಾಡುವ ಕಲೆಯನ್ನು ನೀನು ನಿಜವಾಗಿ ಕಲಿತರೆ ನಿನ್ನ ತಪ್ಪು ನಿನಗೆ ತಿಳಿಯದೆ ಹೋಗಲಿಕ್ಕಿಲ್ಲ.

ಆದುದರಿಂದ, ಸಿದ್ಧಾಂತದ ಬಗ್ಗೆ ನೀನು ನನ್ನ ಅಭಿಪ್ರಾಯ ಕೇಳುವುದನ್ನು ನಿಲ್ಲಿಸಿದ್ದು ನನಗೆ ಬಹಳ ಸಂತೋಷ. ವಿಚಾರಮಾಡುವ ಕಲೆ ನಿನಗೆ ವಶವಾಗುವ ತನಕ ಭಾಷಣ ಮಾಡುವುದನ್ನೇ ಬಿಡು; ಅದರಿಂದ ಇನ್ನೂ ಹೆಚ್ಚು ಸಂತೋಷವಾದೀತು. ಬೇಗ ಆ ಕಲೆಯನ್ನು ವಶಮಾಡಿಕೋ.

ತಿಥಲ್, ಬಲ್ಸಾಡ್, ೧೩--೫--೩೭

**ನಿಮ್ಮೆಲ್ಲರಿಗೂ ಬಾಪೂನ ಆಶೀರ್ವಾದ.**

## ೯೦

ನಿನ್ನ ಕಾಗದಕ್ಕೆ ಪೂರ್ಣ ಉತ್ತರ ಕೊಡಲಾರೆ. ನ
ಸ್ನೇನೋ ಮಾಡುತ್ತೇನೆ. ಭಾಷಣ ಮಾಡಬೇಡ ಎಂದು ನಾ
ಹುಕುಂ ಮಾಡಲಿಲ್ಲ. ಹಾಗೆ ಮಾಡಿದರೆ ಅದನ್ನು ಹಿಂತೆಗೆ
ತ್ತೇನೆ. ಯಾರೆ ಮೇಲೆಯೂ ಅಧಿಕಾರ ನಡಸುವ ಇಷ್ಟ ನನ
ವಿಚಾರದಲ್ಲಿ ಬದಲಾವಣೆಯಾದರೆ ನನಗೇನು ಬಂತು? ನಿನ್ನ
ದಂತೆ ನೀನು ನಡೆಯುತ್ತೀ. ಎಲ್ಲರೂ ಹಾಗೆಯೇ ಮಾಡಬ

ಶುದ್ಧಪ್ರೇಮಕ್ಕೆ ಶರೀರಸ್ಪರ್ಶ ಅಗತ್ಯವಿಲ್ಲ. ಹೀಗೆಂದ
ವೆಂಬದ್ದೆಲ್ಲ ಅಪವಿತ್ರ ಎಂದಲ್ಲ. ತಾಯಿಯ ಮೇಲೆ ನನಗೆ ಶು
ಯಿತ್ತು. ಆಕೆಯ ಕಾಲು ಒತ್ತುತ್ತಿದ್ದೆ. ಅದರಲ್ಲೇನೂ
ಇರಲಿಲ್ಲ. ವಿಕಾರಸ್ಪರ್ಶ ದೂಷಿತವಾದದ್ದು. ಶರೀರಸ್ಪರ್ಶವಿಲ್ಲದ
ಪ್ರೇಮವಲ್ಲ ಎನ್ನುವವರಿಗೆ ಶುದ್ಧಪ್ರೇಮವೆಂದರೇನೋ ಗೊತ್ತಿ

......ರ ಬಗ್ಗೆ ನೀನು ತಿಳಿದುಕೊಂಡದ್ದು ಪೂರ
ನಿನಗೆ ದೊರೆತ ಪ್ರಮಾಣಗಳಿಗೆ ಏನೂ ಬೆಲೆಯಿಲ್ಲ. ಇಂಥ
ನಿಜವೆಂದು ತಿಳಿದುಕೊಳ್ಳುವ ಮೊದಲು ಆ ವ್ಯಕ್ತಿಯನ್ನು ಕೇ
ಅವರಿಂದ ಅಸತ್ಯಾಚರಣೆಯಾಗಿರಲಾರದು ಎನ್ನುವುದಿಲ್ಲ ನಾನು
ಅದನ್ನು ಪರಿಶೀಲನೆ ಮಾಡಬೇಕು. ನೀನು ಹೀಗೆ ಮಾಡಿದೆ
ಮಾಡಿದೆ ಎಂದು ಯಾರಾದರೂ ಬಂದು ನನಗೆ ಹೇಳಿದರೆ
ಮಾಡಬೇಕು? ನಿನ್ನನ್ನು ಕೇಳಬೇಕೋ ಬೇಡವೋ?

ನೀನು ಮಾಡಿದ ಆ ಭಾಷಣದಲ್ಲಿ ಅಂತಃಕರಣದ ಮಾತು
ಇರಲಿ. ಆದರೆ ನೀನೀಗ ಏನು ಬರೆದಿದ್ದೀಯೋ ಅದಲ್ಲ, ನಿನ್ನ
ಬೇರೆಯೇ ಇತ್ತು ಎಂದು ಒಪ್ಪುತ್ತೀಯೇನು? ಅದೇನೆ ಇರಲಿ
ಅನುಭವ ಬೇರೆ, ನಿನ್ನ ತರ್ಕ ಬೇರೆ. ಇದು ನಿನಗೆ ತಿಳಿದಿರಲಿ
ಅನುಭವಕ್ಕಿಂತ ನಿನ್ನ ತರ್ಕಕ್ಕೇ ನೀನು ಹೆಚ್ಚು ಬೆಲೆ ಕೊಡು
ಅದಕ್ಕೆ ನಾನೇನು ಮಾಡಲಿ?

ತಿಥಲ್! ಬಲ್ಸಾಡ್, ೨೯-೫-೩೭

ಬಾಪೂನ ಆಶೀವ

r the educational field of the State of Karnataka. Educated in Mangalore and Tiruchirappalli you had a splendid record in all these d you won great laurels in your pet field of study, namely Physics. ed with distinction in St. Aloysius College, Mangalore–that great f learning—for eight years and in the Government Colleges in Tumkur and Mangalore for another score and six years. Lucky students who had been trained and guided by you in all these titutions. The fulness of your experience and leadership were ailable to the students during the fourteen years you were at the affairs in the Government Colleges as Principal.

e people of Mercara remember you with warmth for the students at you have put up for their wards in the vicinity of the College. ents of Tumkur remember you and cherish your name with affection assive construction of the fortress-like Government College buildings he Mangaloreans too are proud of the Centenary block that you ed to the College campus at the time of the Centenary celebrations.

t only are you an architect with brick and mortar but also a f educational morals and discipline. In fact your very name has a synonym for stern and scrupulous discipline and purposeful living.